# ಗುರು ನಾನಕ್ ವಾಣಿ

ಸಂಪಾದಕ :
ಭಾಈ ಜೋಧ್ ಸಿಂಗ್
ಅನುವಾದ :
ಗುರುನಾಥ ಜೋಶಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹೊಸ ದೆಹಲಿ

# ವಿಷಯಾನುಕ್ರಮಣಿಕೆ

# ನಿವೇದನ

ಗುರುವಾಣಿಯ ಈ ಸಂಕಲನದಲ್ಲಿ ಗುರು ನಾನಕ ದೇವರ ವಾಣಿಯುನ್ನು ಬೇರೆ ಬೇರೆ ಶೀರ್ಷಿಕೆಗಳಲ್ಲಿ ಕೊಡಲಾಗಿದೆ, ಮತ್ತು ಅವರ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಹಾಗು ನೈತಿಕ ವಿಚಾರಗಳನ್ನೂ, ಸಿದ್ಧಾಂತಗಳನ್ನೂ ಪ್ರಕಟಿಸುವ ಯತ್ನ ಮಾಡಲಾಗಿದೆ. ಈ ವಿಚಾರಗಳ ಹಾಗು ಸಿದ್ಧಾಂತಗಳ ಯೋಗ್ಯ ಬೆಲೆ ಕಟ್ಟಲು ಆ ಕಾಲದ ಪಂಜಾಬದ ಮೇಲ್ಕಾಣಿಸಿದ ನಾಲ್ಕೂ ಕ್ಷೇತ್ರಗಳ ಸ್ಥಿತಿ – ಗತಿಗಳನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕಾದುದು ಅವಶ್ಯಕ. ಭಾರತವರ್ಷದ ಈ ಭಾಗವು ಅತ್ಯಂತ ಮಹತ್ವಪೂರ್ಣವಾದದ್ದು. ಏಕೆಂದರೆ ಇಲ್ಲಿಯೇ ಮೊಟ್ಟ ಮೊದಲಿಗೆ ವೇದಮಂತ್ರಗಳು ಗುಂಜಿಸಿದ್ದು. ಶಬ್ದಗಳ ಶುದ್ಧ ಉಚ್ಚಾರವನ್ನು ಕಲಿಯಲೋಸುಗ ಸ್ನಾತಕರು ಈ ಭೂಭಾಗದಲ್ಲಿದ್ದ ಆಶ್ರಮಗಳಿಗೆ ಆಗಾಗ್ಗೆ ಬರುತ್ತಿದ್ದರು. ಸಂಸ್ಕೃತ ಭಾಷೆಯ ಸರ್ವಶ್ರೇಷ್ಠ ವೈಯಾಕರಣರಾಗಿದ್ದ ಪಾಣಿನಿಯವರು ಇದೇ ಭೂಭಾಗದಲ್ಲಿ ಜನಿಸಿದರು, ಅವರ ಪಾಲನೆ ಪೋಷಣೆ ಆದದ್ದೂ ಇಲ್ಲಿಯೇ. ಅಲ್ಲದೆ, ಬೌದ್ಧ ಮತವೂ ಬಹುಕಾಲದ ವರೆಗೆ ಇದೇ ಕ್ಷೇತ್ರದಲ್ಲಿ ಪಲ್ಲವಿತವಾಗಿ, ಚರಮೋತ್ಕರ್ಷತೆಯನ್ನು ಮುಟ್ಟಿತು. ತಕ್ಷಶಿಲೆಯ ವಿದ್ಯಾಪೀಠವೂ ಇದೇ ಕ್ಷೇತ್ರದಲ್ಲಿದ್ದಿತು. ಆದರೆ ಗುರು ನಾನಕರು ಅವತರಿಸಿದ ಸಮಯದಲ್ಲಿ ಇಲ್ಲಿ ಬೌದ್ಧಧರ್ಮ ಸುಮಾರಾಗಿ ಸಮಾಪ್ತವಾಗಿತ್ತು. ಜೈನ ಧರ್ಮಾವಲಂಬಿಗಳು ಸಹ ಒಂದೊಂದು ನಗರದಲ್ಲಿರುತ್ತಿದ್ದರು. ಆದರೆ ಅವರು ಹಿಂದೂ ಸಮಾಜದ ಒಂದು ಅಂಗವಾಗಿಯೇ ಇದ್ದರು. ಎರಡೇ ಧರ್ಮಗಳು ಬಹು ಸಂಖ್ಯೆಯವಾಗಿದ್ದುವು: ಹಿಂದೂ ಹಾಗು ಇಸ್ಲಾಮ್. ಗೋರಖ ಪಂಥದ ಹರಿದ ಕಿವಿಗಳ ಸಾಧುಗಳ ಪ್ರಭಾವವು ಸಾಮಾನ್ಯ ಹಿಂದೂ ಹಾಗು ಮುಸಲ್ಮಾನ ಜನತೆಯ ಮೇಲೆ ಸಾಕಷ್ಟಾಗಿತ್ತು. ಅವರಲ್ಲಿ ಸಿದ್ಧಿಗಳು ಅರ್ಥಾತ್ ಚಮತ್ಕಾರಕ ಶಕ್ತಿಗಳು – ಪವಾಡಶಕ್ತಿಗಳು – ಇರುತ್ತವೆಂಬ ವಿಶ್ವಾಸ ಜನರಲ್ಲಿ ಬೇರೂರಿಕೊಂಡಿತು. ಯಂತ್ರ, ಮಂತ್ರ, ತಂತ್ರ ವಿದ್ಯೆಯಿಂದಾಗಿ ಆಗಿನ ಕಾಲದ ಜನ ಯೋಗಿಗಳಿಗೆ ವಿಶೇಷ ಮಹತ್ವ ಕೊಡುತ್ತಿದ್ದರು. ಯೋಗಿಗಳ ವರದಾನದಿಂದ ಸಮೃದ್ಧಿಯನ್ನು ಪಡೆಯುವ ಆಸೆಯಿಂದ ಪ್ರೇರಿತರಾಗಿ ಅಥವಾ ಶಾಪದ ಭಯದಿಂದ ಜನರು ಅವರ ಸೇವೆಯನ್ನು, ಶುಶ್ರೂಷೆಯನ್ನು ಮಾಡುತ್ತಿದ್ದರು; ಒಮ್ಮೊಮ್ಮೆ ಅವರನ್ನು ಗುರುಗಳನ್ನಾಗಿಯೂ ಸ್ವೀಕರಿಸುತ್ತಿದ್ದರು. ಮುಸಲ್ಮಾನ ಮತ್ತು ಹಿಂದೂ ಈ ಎರಡೂ ಧರ್ಮದವರಿಗೂ ದೀಕ್ಷೆಕೊಟ್ಟು, ಈ ಪಂಥದಲ್ಲಿ ಸೇರಿಸಿಕೊಳ್ಳಲಾಗುತ್ತಿತ್ತು. ಪೂರಣ ಮತ್ತು ರಾಂಝೂ ಈ ಮತವನ್ನು ಸ್ವೀಕರಿಸಿದುದು ಈ ಮಾತಿಗೆ ಸಾಕ್ಷಿಯಾಗಿದೆ.

ಹಿಂದೂಗಳು ಕೇವಲ ನಾಲ್ಕು ವರ್ಣಗಳಲ್ಲೇ ವಿಭಾಗಗೊಂಡಿರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗು ಶೂದ್ರರಲ್ಲಿಯೂ ಅನೇಕ ಜಾತಿಗಳು ಇದ್ದವು. ಒಂದೇ ವರ್ಣದ ಉಪಜಾತಿಗಳಲ್ಲಿ ಸಹ ಮೇಲು – ಕೀಳು ಎಂಬ ಭೇದಭಾವ ಹಬ್ಬಿತ್ತು. ಈ ನಾಲ್ಕೂ ವರ್ಣಗಳಿಂದ ಬೇರೆಯಾದ ಇನ್ನೊಂದು ವರ್ಗವಿತ್ತು: ಚಾಂಡಾಲರದು. ಈ ಚಾಂಡಾಲರ ಕೇವಲ ಸ್ಪರ್ಶವು ಅಪವಿತ್ರತೆಯ ದ್ಯೋತಕವಾಗಿತ್ತು.

ಆಧುನಿಕ ಹಿಂದೂ ಚಿಂತಕರು ಜಾತಿವಾದದ ವಿರುದ್ಧವಾಗಿದ್ದರೂ ವರ್ಣ ವ್ಯವಸ್ಥೆಯನ್ನು ಅನುಮೋದಿಸುತ್ತಾರೆ. "ಮನುಷ್ಯನು ನಿರಪೇಕ್ಷ ವ್ಯಕ್ತಿಯಲ್ಲ. ಸಮಾಜದಲ್ಲಿ ತನ್ನ ಚಾರಿತ್ರ್ಯ, ಆಚರಣೆ ಮತ್ತು ಕರ್ಮಕ್ಕೆ ಅನುಸಾರವಾಗಿ ಅವನು ಒಂದಿಲ್ಲೊಂದು ಸಾಮಾಜಿಕ ಗುಂಪಿನೊಡನೆ ಸಂಬಂಧವಿದ್ದವನಿರುತ್ತಾನೆ. ಸಮಾಜದ ಚತುರ್ವರ್ಣ ವಿಭಜನೆಯನ್ನು ಈಶ್ವರೀಯ ವಿಧಾನವೆಂದಾಗಲೀ, ಆತ್ಮಿಕ ವ್ಯವಸ್ಥೆಯೆಂದಾಗಲೀ ಒಪ್ಪಿಕೊಂಡರೆ, ಅದರ ಭಾವವೇನೆಂದರೆ ಆತ್ಮಿಕ ವಿವೇಕ, ಸಂಪಾದಿಸುವ ಯೋಗ್ಯತೆ, ಉತ್ಪಾದನೆಯ ಕೌಶಲ್ಯ ಮತ್ತು ಸೇವಾಪರಾಯಣತೆ ಇವು ಯಾವುದೇ ಸಾಮಾಜಿಕ ವ್ಯವಸ್ಥೆಯ ಅನಿವಾರ್ಯ ಅಂಗಗಳು ಎಂದು. ಸಾಮಾಜಿಕ ವ್ಯವಸ್ಥೆಗೋಸ್ಕರ ಯೋಜನೆಗಳನ್ನು ತಯಾರಿಸುವುದು ವಿಚಾರವಂತ ವಿದ್ವಾಂಸರ ಕೆಲಸ. ಸಮಾಜದ ಬಲಿಷ್ಠ ಅಂಗವು ಇಂಥ ಯೋಜನೆಗಳನ್ನು ಅನುಮೋದಿಸುತ್ತದೆ, ಎಂದರೆ ಅವುಗಳನ್ನು ಬಲವಾಗಿ ಅಧಿಕಾರಯುತವಾಗಿ ನೆಲೆಗೊಳಿಸುತ್ತದೆ. ಕುಶಲ ಕರ್ಮಿಗಳು ಅವುಗಳನ್ನು ಸಂಪಾದಿಸುತ್ತಾರೆ ಅಥವಾ ಸೇವಾಪರಾಯಣರಾದ ಶಿಲ್ಪಿಗಳ ನೆರವಿನಿಂದ ಅವುಗಳಿಗೆ ವ್ಯಾವಹಾರಿಕ ರೂಪ ಕೊಡುತ್ತಾರೆ"[1] ಇದೇ ಯುಕ್ತಿಯನ್ನು ಹೆಚ್ಚು ಪುಷ್ಟೀಕರಿಸುತ್ತ ಮುಂದೆ ಪುನಃ ಹೀಗೆ ಬರೆದಿದ್ದಾರೆ. "ಏನೆಂದರೆ ವ್ಯಕ್ತಿ ಸಮಾಜದ ಸೃಷ್ಟಿ. ಆದ್ದರಿಂದ ವ್ಯಕ್ತಿತ್ವದ ವಿಕಾಸಕ್ಕೆ ಸಮಾಜ ಒಂದು ಅಗತ್ಯವಾದ ಉಪಾಯ. ಸಮಾಜದಲ್ಲಿ ವ್ಯಕ್ತಿಗೆ ಸುರಕ್ಷಿತ ಸ್ಥಾನವಿರುವುದು ಅವಶ್ಯಕ, ಸಮಾಜದಿಂದ ಹೆಚ್ಚು ಹೆಚ್ಚು ಸಹಾಯ ಪಡೆಯುವುದಕ್ಕಾಗಿ, ತನ್ನ ರುಚಿಗೆ ಅನುಸಾರವಾಗಿ ವ್ಯಕ್ತಿ ನಾಲ್ಕು ವರ್ಗಗಳಲ್ಲಿ ಬದ್ಧನಾಗುತ್ತಾನೆ: ವಿದ್ವಾಂಸ ಮತ್ತು ಜ್ಞಾನವಂತ, ಶಕ್ತಿಶಾಲಿ ಮತ್ತು ಕ್ರಿಯಾಶೀಲ, ಸುಶಿಕ್ಷಿತ ಶಿಲ್ಪಿ ಮತ್ತು ಶ್ರಮಿಕ. ಮನುಷ್ಯನ ಕ್ರಿಯಾಶೀಲ ರುಚಿಗೆ ಅನುಸಾರವಾಗಿ ಸ್ಫುಟವಾಗಿ ಮೇಲೆದ್ದ ಅಂಶಗಳು ತಮ್ಮ ವರ್ಗವನ್ನು ತಾವೇ ನಿಶ್ಚಯಿಸಿಕೊಳ್ಳುತ್ತವೆ"[2]

ಹಿಂದೂಗಳ ರಾಜ್ಯವು ಈ ದೇಶದಲ್ಲಿ ಇದ್ದಾಗ ಈ ವ್ಯವಸ್ಥೆ ಬಹುಶಃ ಒಳ್ಳೆಯ ರೀತಿಯಿಂದ ಸಾಗುತ್ತಿತ್ತು. ಅದಕ್ಕೆ ಅನುಸಾರವಾಗಿ ವ್ಯಕ್ತಿಯು ತನ್ನ ಚರಿತ್ರ, ನಡತೆ, ಮತ್ತು ಕರ್ಮಕ್ಕೆ ಅನುಸಾರವಾಗಿ ವರ್ಗಗಳನ್ನು ಆರಿಸಿಕೊಳ್ಳಬಲ್ಲವನೂ ಅದನ್ನು ಬದಲಿಸಬಲ್ಲವನೂ ಆಗಿದ್ದ. ಆದರೆ ಜನಸಂಖ್ಯೆ ಬೆಳೆಯುತ್ತ ಹೋಗಿ ಪ್ರತಿಯೊಬ್ಬ ವ್ಯಕ್ತಿಯ ಚರಿತ್ರೆ, ಆಚರಣೆ ಹಾಗು ಕರ್ಮವನ್ನು ಪರಿಕ್ಷಿಸುವುದು, ಗುರುತಿಸುವುದು ಅಸಂಭವವಾಗುತ್ತ ಹೋದಾಗ ಹುಟ್ಟಿನಿಂದಲೇ ವರ್ಣವು ನಿಶ್ಚಯವಾಗತೊಡಗಿತು. ಬ್ರಾಹ್ಮಣರ ಮನೆಯಲ್ಲಿ ಹುಟ್ಟಿದವರು ಬ್ರಾಹ್ಮಣರು—ಅವರಲ್ಲಿ ಬ್ರಾಹ್ಮಣರಂಥ ಆಚರಣೆ ಮತ್ತು ಕರ್ಮಗಳು ಲೇಶಮಾತ್ರ ಇರದಿದ್ದರೂ ಸಹ; ಸಮಯವು ಕಳೆಯುತ್ತ ಹೋದಂತೆ ಉಚ್ಚ ವರ್ಣದವರು ತಮ್ಮ ಅಧಿಕಾರಗಳ ಬಗ್ಗೆ ದೃಢವಾಗತೊಡಗಿದರು, ತಮ್ಮ ಕರ್ತವ್ಯಗಳನ್ನು ಮರೆಯುತ್ತ ಸಾಗಿದರು. ತಮ್ಮ ಸ್ಥಾನ ಮಾನಗಳನ್ನು ಅಖಂಡವಾಗಿ, ಚಿರಂತನವಾಗಿ ಕಾಪಾಡಿಕೊಳ್ಳುವದಕ್ಕೋಸ್ಕರ ಅವರು ಆವಾಗಮನದ ಸಿದ್ಧಾಂತದ ಮೇರೆಗೆ ಒಂದು ಯುಕ್ತಿಯನ್ನು ಹೂಡಿದರು. ಪ್ರತಿಯೊಂದು ಆತ್ಮನ ಪುನರ್ಜನ್ಮವು ಅವನ ಜನ್ಮದ ಅಭಿರುಚಿಗೆ ಅನುಸಾರವಾಗಿ ಅವನು ಯಾವ ವರ್ಣಕ್ಕೆ ಯೋಗ್ಯನಿರುವನೋ ಅದೇ ವರ್ಣದಲ್ಲಿ ಆಗುತ್ತದೆ. ಈ ಕಾರಣದಿಂದಾಗಿ ವ್ಯಕ್ತಿಯು ಯಾವ ವರ್ಣದಲ್ಲಿ ಜನ್ಮಿಸುತ್ತಾನೊ ಅದರ ನಿರ್ಧಾರಿತ ಕಟ್ಟುಪಾಡುಗಳಿಗೆ ಅನುಸಾರವಾಗಿ ನಡೆದುಕೊಂಡು, ತನ್ನ ಆತ್ಮವಿಕಾಸವನ್ನು ಮಾಡಿಕೊಳ್ಳಬಲ್ಲನು. ಆದರೆ ಈ ಯುಕ್ತಿ ಮಾನ್ಯವೆನಿಸುವುದಿಲ್ಲ. ಇದರ ಪ್ರಕಾರವಾಗಿ ಬ್ರಾಹ್ಮಣ ವರ್ಣದಲ್ಲಿ ಜನಿಸಿದವರೆಲ್ಲರೂ ತ್ಯಾಗಶೀಲರೂ, ವಿದ್ಯಾಪ್ರೇಮಿಗಳೂ,

1. "Eastern Religions and Western Thought" by Dr. S. Radhakrishnan, II Edition P. 356
2. ಅದೇ, ಪುಟ 357

ಜ್ಞಾನನಿಧಿಗಳೂ ಆಗುತ್ತಿದ್ದರು, ಶೂದ್ರರಲ್ಲಿ ಯಾವ ಭಕ್ತನೂ ಹುಟ್ಟುತ್ತಿರಲಿಲ್ಲ. ಆದರೆ ಸಂಗತಿಗಳು ಇದಕ್ಕೆ ತೀರ ವಿರುದ್ಧವಾಗಿ ಜರುಗಿವೆ.

ಈ ವಿಭಜನೆಯಿಂದ ಹಿಂದೂ ಸಮಾಜದಲ್ಲಿ ಇನ್ನೊಂದು ದೋಷವೂ ತಲೆದೋರಿತು. ವರ್ಣ ಧರ್ಮದ ಮೇರೆಗೆ ಕೇವಲ ಕ್ಷತ್ರಿಯರೇ ಅಸ್ತ್ರಶಸ್ತ್ರಧಾರಿಗಳಾದರು. ಯಾವ ಸಮಾಜದಲ್ಲಿಯೇ ಆಗಲಿ, ಶಿಲ್ಪಿಗಳ ಮತ್ತು ಶ್ರಮಿಕರ ಸಂಖ್ಯೆ ಸೈನಿಕರಿಗಿಂತ ಎಷ್ಟೋ ಪಾಲು ಹೆಚ್ಚು ಇರುತ್ತದೆ, ಇದರ ಪರಿಣಾಮವಾಗಿ ದೇಶದ ರಕ್ಷಣೆಗಾಗಿ ಸ್ವಲ್ಪವೇ ಜನರುಳಿದರು. ಇನ್ನೂ ಒಂದು ದುಷ್ಪರಿಣಾಮವೇನೆಂದರೆ "ರಾಜ್ಯದ ಕಾರ್ಯವು ವಿಧಾನ ಮತ್ತು ದೇಶದ ರಕ್ಷಣೆಯಷ್ಟಕ್ಕೆ ಮಾತ್ರ ಸೀಮಿತವಾಯಿತು. ಜನರು ತಮ್ಮ ಜಗಳಗಳನ್ನು ಪರಂಪರೆಯಿಂದ ಬಂದ ನಿಯಮಗಳಿಗೆ ಮತ್ತು ರೂಢಿಗಳಿಗೆ ಅನುಸಾರವಾಗಿ ತೀರಿಸಿಕೊಳ್ಳುವುದಕ್ಕೆ ಅವರಿಗೆ ಸ್ವಾತಂತ್ರ್ಯವಿತ್ತು. ತಮ್ಮ ಜೀವನದಲ್ಲಿ ಯಾವದೇ ತರಹದ ಹಸ್ತಕ್ಷೇಪವಾಗುವ ವರೆಗೆ ಶಾಸಕರು ಯಾರಿದ್ದಾರೆಂಬ ಬಗ್ಗೆ ಪರವೆಯೇ ಅವರಿಗೆ ಇರುತ್ತಿದ್ದಿಲ್ಲ. ಒಂದು ರಾಜ್ಯಧ್ವಜ ಎಷ್ಟು ಒಳ್ಳೆಯದೋ ಇನ್ನೊಂದು ಅಷ್ಟೇ ಒಳ್ಳೆಯದು—ಲೋಕಜೀವನ ಮೊದಲಿನಂತೆ ಸುಗಮವಾಗಿದ್ದರೆ ಸಾಕು. ಇದರ ಪರಿಣಾಮ ಏನಾಯಿತೆಂದರೆ ದೇಶ ವಿದೇಶೀ ಆಕ್ರಮಣಕಾರರಿಗೆ ಸುಲಭವಾದ ಶಿಕಾರಿಯಾಯಿತು.[1]

ಆದರೆ ಮುಸಲ್ಮಾನ ಆಕ್ರಮಣಕಾರರು ದೇಶವನ್ನು ಗೆದ್ದು ಭಾರತ-ವರ್ಷದಲ್ಲಿ ತಮ್ಮ ರಾಜ್ಯ ಸ್ಥಾಪಿಸಿದಾಗ ಹಿಂದೂಗಳ ಎದುರಿಗೆ ಮತ್ತೊಂದು ಸಮಸ್ಯೆ ಬಂದು ನಿಂತಿತು.

"ಈ ಪುರಾತನ ಭಾರತೀಯ ಅರ್ಥಾತ್ ಹಿಂದೂ ಜಗತ್ತಿನಲ್ಲಿ ಎರಡು ವಿನಾಶಕಾರಿ ಅಂಶಗಳು ಒಳ ಸೇರಿದವು. ಅವುಗಳ ಆದರ್ಶದ ಹಿನ್ನೆಲೆ ಒಂದೇ ಆಗಿತ್ತು. ಇವುಗಳಲ್ಲಿ ಎರಡನೆಯದು ಭಾರತೀಯ ಚಿಂತನ ಹಾಗು ಜೀವನದಲ್ಲಿ ಬಹಳಷ್ಟು ಬದಲಾವಣೆ ಮಾಡಿತು. ಈ ಅಂಶಗಳು ಯಾವುವೆಂದರೆ, ಎಂಟನೆಯ ಶತಮಾನದ ಆರಂಭದಲ್ಲಿ ಸಿಂಧಪ್ರಾಂತದ ಮೇಲೆ ವಿಜಯ ಸಂಪಾದಿಸಿದ ಅರಬರು, ಮತ್ತು ಅಫಘಾನಿಸ್ತಾನದಿಂದ ಕೊಳ್ಳೆ-ಸುಲಿಗೆಯ ಮುಖಾಂತರ ಬಹುಶಃ ಹತ್ತನೆಯ ಶತಮಾನದ ಮಧ್ಯದಿಂದ ಆಕ್ರಮಣವನ್ನು ಪ್ರಾರಂಭಿಸಿದ ತುರ್ಕರು. ಭಾರತದಿಂದ ಅವರು ಕತ್ತರಿಸಿ ತೆಗೆದುಕೊಂಡ ಪ್ರಥಮ ಹಿಂದೂ ಭೂಭಾಗ ಅಫಘಾನಿಸ್ತಾನ. ಹನ್ನೆರಡನೆಯ ಶತಮಾನದ ಪ್ರಾರಂಭದಲ್ಲಿ ಪಂಜಾಬ ಪ್ರಾಂತವನ್ನು ಗೆದ್ದು ಪಂಜಾಬು ಇಸ್ಲಾಮದ ಪ್ರಭಾವಕ್ಕೊಳಗಾಯಿತು. ಹದಿಮೂರನೆಯ ಶತಮಾನದ ವರೆಗೆ ಅವರು ಉತ್ತರ ಭಾರತ ಮತ್ತು ಪಶ್ಚಿಮ ಬಂಗಾಲದ ವರೆಗೆ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು; ದಿಲ್ಲಿಯನ್ನು ತಮ್ಮ ಕೇಂದ್ರವನ್ನಾಗಿ ಮಾಡಿಕೊಂಡು ಈ ಭಾಗದಲ್ಲಿ ಸ್ಥಾಯಿಯಾಗಿ ಇಸ್ಲಾಮಿ ಶಾಸನವನ್ನು ಭದ್ರಗೊಳಿಸಿದರು. ಅವರ ಸಾಮ್ರಾಜ್ಯವು ಹದಿನೆಂಟನೆಯ ಶತಮಾನದ ಮಧ್ಯದ ವರೆಗೆ ಶಕ್ತಿಶಾಲಿಯೂ, ಪ್ರಭಾವಶಾಲಿಯೂ ಆಗಿತ್ತು. ಅರಬರಿಗೂ, ತುರ್ಕರಿಗೂ ಬಹಳಷ್ಟು ಶಕ್ತಿ ಇಸ್ಲಾಮದಿಂದ ದೊರಕಿತು. ಹಿಂದೂಭಾವನೆ ಮತ್ತು ಸಂಸ್ಕೃತಿಯನ್ನು ಕುರಿತು ಅತ್ಯಂತ ಅಲ್ಪಾಂಶ ಜ್ಞಾನ ಹೊಂದಿದ್ದ ಇಸ್ಲಾಮವು ಭಾರತದಲ್ಲಿ ಇವೆರಡರ ಬಗ್ಗೆಯೂ ಅತ್ಯಂತ ಅಸಹಿಷ್ಣುವಾಗಿತ್ತು."[2]

ಪೈಗಂಬರ ಸಾಹೇಬರು ಪ್ರಚಾರಗೊಳಿಸಿದ ನಿಜವಾದ ಧರ್ಮದ ಒಳಗಡೆಗೆ ಇಸ್ಲಾಮೇತರ ಹಿಂದುಸ್ತಾನವನ್ನು ತರಬೇಕೆಂಬುದೇ ದೇವರು ಕಳುಹಿಸಿದ ಈ ವಿಶಾಲ ಮಿಶನ್ನಿನ ಉದ್ದೇಶ್ಯವಾಗಿತ್ತು. ಈ ಪ್ರಕಾರ ನಿಶ್ಚಯ ಮಾಡಿಕೊಂಡು ಇಸ್ಲಾಮವು ಭಾರತವನ್ನು ಪ್ರವೇಶಿಸಿತು. ವಿನಾಶ ಮಾಡುವುದು ಮತ್ತು ವಿನಾಶ

---

1. ಅದೇ, ಪುಟ 362
2. 'ಹಿಂದುಸ್ತಾನೀ ಸಂಸ್ಕೃತಿ', ಪುಟ 54-55

ವಾದ ಸ್ಥಳವನ್ನು ಹಿಡಿದುಕೊಳ್ಳುವುದು ಇದರ ಗುರಿಯಾಗಿತ್ತು, ಯಾವುದಾದರೂ ಖಾಲಿ ಇದ್ದು ಅದನ್ನು ತುಂಬುವದು ಇದರ ಗುರಿಯಾಗಿರಲಿಲ್ಲ. ಇದರ ಅನುಯಾಯಿಗಳು ಹಿಂದೂಗಳನ್ನು ಗೆದ್ದರಲ್ಲದೆ ಕೊಳ್ಳೆ ಸಹ ಹೊಡೆದರು. ಇದರಿಂದ ಅವರು ಸ್ವಲ್ಪ ಆರ್ಥಿಕ ಲಾಭವನ್ನು ಮಾಡಿಕೊಂಡರು. ದೇವರ ಧರ್ಮಸೈನಿಕರ ರೂಪದಲ್ಲಿ ಅವರು ನಾಸ್ತಿಕರ ವಿರುದ್ಧ (ಇಸ್ಲಾಮೇತರ ಧರ್ಮಾನುಯಾಯಿಗಳ ವಿರುದ್ಧ) ಯುದ್ಧ ಮಾಡುತ್ತಿದ್ದರು. ಈ ರೀತಿಯಾಗಿ ಅವರು ಆಧ್ಯಾತ್ಮಿಕ ಫಲದ ಅಧಿಕಾರಿಗಳೂ ಆಗಿದ್ದರು. ಆರ್ಥಿಕ ಹಾಗು ಆಧ್ಯಾತ್ಮಿಕ ಲಾಭಗಳು ಒಂದು ಇನ್ನೊಂದರಲ್ಲಿ ಬೆರತುಹೋದವು. ಅವರು ತುರ್ಕೀ ರೀತಿಯಲ್ಲಿ ವಿಜಯಪಡೆದರು, ಕೊಲೆ ಮಾಡಿದರು, ಕೊಳ್ಳೆಹೊಡೆದರು. ಧರ್ಮ ಬದಲಾವಣೆಯ ಆಂದೋಲನ ಮಾಡಿದರು; ಭಾರತೀಯ ಸಭ್ಯತೆ ಮತ್ತು ಇಸ್ಲಾಮದ ನಡುವೆ ಉಂಟಾದ ಈ ತಿಕ್ಕಾಟ ದಿಂದಾಗಿ ಕೆಲಸಮಯದ ವರೆಗೆ ಅತ್ಯಂತ ಸಂಕಟಮಯ, ಕಳವಳಕಾರಕ ಸ್ಥಿತಿಯುಂಟಾಯಿತು.

ವಿದ್ವಾಂಸರಾದ ಲೇಖಕರು ಅರಬರಿಗೂ ತುರ್ಕರಿಗೂ ಇಸ್ಲಾಮದಿಂದ ಬಲ ದೊರೆಯಿತೆಂದು ಒಪ್ಪಿದ್ದಾರೆ, ಐತಿಹಾಸಿಕ ದೃಷ್ಟಿಯಿಂದ ಇದಂ ಸರಿಯಾಗಿಯೂ ಇದೆ. ಇಸ್ಲಾಮದ ಪ್ರಚಾರಕ್ಕಿಂತ ಮೊದಲು ಅರಬರು ಬೇರೆ ಬೇರೆ ಗುಂಪುಗಳಲ್ಲಿ ವಿಭಕ್ತರಾಗಿದ್ದ ತಮ್ಮತಮ್ಮಲ್ಲಿ ಕಾದಾಡುತ್ತಿದ್ದರು. ಇಸ್ಲಾಮವು ಅವರನ್ನು ಬೇರೆ ಬೇರೆ ಮೂರ್ತಿಗಳ ಪೂಜೆಯಿಂದ ಬಿಡಿಸಿ ಒಬ್ಬನೇ ದೇವರ ಉಪಾಸನೆ – ಪ್ರಾರ್ಥನೆಯ ಕಡೆಗೆ ಪ್ರೇರೇಪಿಸಿ ಒಯ್ದಿತು, ಎಲ್ಲ ಮನುಷ್ಯರನ್ನೂ ಸೋದರರುತೆ ಕಾಣಬೇಕೆಂದು – ತಿಳಿಯ ಬೇಕೆಂದು ಹೇಳಿತು. ಈ ನಿಯಮವನ್ನು ಕಾರ್ಯರೂಪದಲ್ಲಿ ತಂದು ಅರಬರು ಒಂದು ಶಕ್ತಿಶಾಲಿ ಜನಾಂಗ ವಾಗುವಲ್ಲಿ ಯಶಸ್ವಿಯಾದರು.

ಹೀಗಿರುವಾಗ ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ ಮತ್ತು ಸೋಮನಾಥದಿಂದ ಜಗನ್ನಾಥ ಪುರಿಯ ವರೆಗೆ ಹಬ್ಬಿದ್ದ ಹಿಂದೂ ಸಂಸ್ಕೃತಿ ಅವರನ್ನು ಎದುರಿಸಲು ಶಕ್ತಿಪ್ರದರ್ಶನವನ್ನೇಕೆ ಮಾಡಲಿಲ್ಲ ? ಮುಸಲ್ಮಾನ ದಾಳಿಗಾರರಿಗಿಂತ ಎಷ್ಟೋಪಾಲು ಹೆಚ್ಚು ಸಂಖ್ಯೆಯಲ್ಲಿ ಹಿಂದೂಗಳಿದ್ದರು. ಹಿಂದೂಗಳಿಗೆ ಒಬ್ಬ ಬ್ರಹ್ಮನ ಜ್ಞಾನವು ಉಪನಿಷದ್ ಮುಂತಾದವುಗಳಿಂದ ಲಭ್ಯವಾಗಿದ್ದರೂ ಅವರು ಈ ವರೆಗೆ ಒಬ್ಬ ಬ್ರಹ್ಮನ ಸ್ಥಾನದಲ್ಲಿ ಅನೇಕ ದೇವಿ ದೇವತೆಗಳನ್ನು, ಅವತಾರಗಳನ್ನು, ಪಶುಗಳನ್ನು, ಸರ್ಪಗಳನ್ನು, ವೃಕ್ಷ ಗಳನ್ನು ಪೂಜಿಸುತ್ತ ಸಾಗಿದ್ದರು. ಹಿಂದೂ ಸಮಾಜವು ಅನೇಕ ವರ್ಣಗಳಲ್ಲಿ ಮತ್ತು ಜಾತಿಗಳಲ್ಲಿ ಹಂಚಿ ಹೋಗಿತ್ತು. ಮುಸಲ್ಮಾನರಂತೆ ಅವರು ಒಂದು ಜನಾಂಗವಾಗಿ ಯಾವ ಹೆಜ್ಜೆಯನ್ನೂ ಮುಂದಿಡುವಂತಿರ ಲಿಲ್ಲ. ಗುರು ನಾನಕ ದೇವರು ಈ ಅಶಕ್ತತೆಯನ್ನು ಅರಿತುಕೊಂಡಿದ್ದರು.

ಅಂದಿನ ಭಾರತದಲ್ಲಿ ವಾಸಿಸುತ್ತಿದ್ದ ಮುಸಲ್ಮಾನರಲ್ಲಿ ಅಧಿಕಾಂಶ ಜನರು ವಿದೇಶಗಳಿಂದ ಬಂದವರಾಗಿರಲಿಲ್ಲ. ಅವರು ಇದೇ ದೇಶದಲ್ಲಿ ಹುಟ್ಟಿ ಬೆಳೆದವರಾಗಿದ್ದು ಹಿಂದೂಗಳೊಡನೆ ಅವರ ಘನಿಷ್ಠ ಸಂಬಂಧವೂ ಇತ್ತು. ಅವರನ್ನು ದೇಶದಿಂದ ಹೊರಗೆ ಹಾಕಬೇಕೆಂಬ ಗುರಿ ಗುರು ನಾನಕ ದೇವರಿಗೆ ಇದ್ದಿಲ್ಲ; ಆದರೆ ಅವರು ಇದನ್ನು ತಿಳಿಸಿ ಹೇಳಲು ಪ್ರಾರಂಭಿಸಿದರು: 'ಜೊ ರತೆ ಸಹಿ ಆಪಣ್ಯೆ ತಿನ ಭಾವೈ ಸಭ ಕೋಈ'[1] ಯಾರು ತಮ್ಮ ಪರಮಾತ್ಮನನ್ನು ಪ್ರೀತಿಸುತ್ತಾರೊ ಅವರು ಎಲ್ಲರನ್ನೂ ಪ್ರೀತಿಸುತ್ತಾರೆ. ಒಂದು ಮರವನ್ನು ಅದರ ಫಲಗಳಿಂದ ಗುರುತಿಸಬಹುದು. ಇದೇ ಪ್ರಕಾರವಾಗಿ ಒಬ್ಬ ವ್ಯಕ್ತಿಯ ಧರ್ಮವು ಅವನ ವ್ಯವಹಾರದಿಂದ ಪ್ರಕಟವಾಗುತ್ತದೆ. ನಾನು ಇಂಥ ನಬೀ ಅಥವಾ ಅವತಾರದಲ್ಲಿ ಆಸ್ಥೆಯುಳ್ಳವನು ಎಂದು ಮಾತ್ರ ಹೇಳುವುದರಿಂದ ಯಾವ ಪ್ರಯೋಜನವೂ ಆಗದು. ಆ ಮಹಾ ಮಾನವನ ವಾಣಿಯನ್ನು ನಾವು ಕಾರ್ಯರೂಪದಲ್ಲಿ ತರದಿದ್ದರೆ ಏನು ಪ್ರಯೋಜನ?

1. ತಿಲಂಗ, 2, 1

ಮುಸಲ್ಮಾನರು ಸಮಸ್ತ ಪ್ರಪಂಚಕ್ಕೆ ದೇವನೊಬ್ಬನೇ ತಂದೆಯೆಂದು ಮನ್ನಿಸುವರಾದರೂ ಎಲ್ಲರೂ ಪರಸ್ಪರ ಸಹೋದರರು ಎಂಬ ಸಿದ್ಧಾಂತದ ಪ್ರಚಾರ ಮಾಡುವರಾದರೂ, ವ್ಯವಹಾರದಲ್ಲಿ ಮುಸಲ್ಮಾನರಾದವರನ್ನು ಮಾತ್ರ ಸಹೋದರರೆಂದು ತಿಳಿಯುತ್ತಾರೆ. ಆದ್ದರಿಂದ ಕೀಳೆಂದು ತಿಳಿದು ಹಿಂದೂ ಸಮಾಜದಲ್ಲಿ ಕೀಳಾಗಿ ನಡೆಸಿಕೊಳ್ಳುತ್ತಿದ್ದ ಹಿಂದೂ ಜಾತಿಗಳು ಇಸ್ಲಾಮಿನ ಕಡೆಗೆ ಆಕರ್ಷಿತವಾದವು. ಅವು ಇಸ್ಲಾಮನ್ನು ಒಪ್ಪಿಕೊಂಡವು. ಯಾಕೆಂದರೆ ಮುಸಲ್ಮಾನ ಸಮಾಜದಲ್ಲಿ ಅವಕ್ಕೆ ಸಮಾನತೆಯ ಸ್ಥಾನ ದೊರೆಯುತ್ತಿತ್ತು. ಆದರೆ ಅವಕ್ಕೆ ಸಂಪೂರ್ಣ ಯಶಸ್ಸು ಈ ದಿಸೆಯಲ್ಲಿ ಸಿಕ್ಕದೆ ಹೋದುದೂ ಸತ್ಯ. ಮುಸಲ್ಮಾನರೂ ತಳಿಯ ಭೇದಭಾವದಿಂದ ಮುಕ್ತರಿದ್ದಿಲ್ಲ. ಭಾರತಕ್ಕೆ ಬಂದ ಅನಂತರ ಅವರ ತಳಿಯ ಭೇದಭಾವವು ಸ್ವಲ್ಪ ಹೆಚ್ಚು ಕಡಿಮೆಯಾಗಿ ಜಾತಿ – ಪಂಕ್ತಿಯ ರೂಪವನ್ನು ತಾಳಿತು; ಎರಡೂ ಸಂಪ್ರದಾಯಗಳಲ್ಲಿ ಸಾಕಷ್ಟು ಸಂಘರ್ಷವಿದ್ದ ಕಾರಣ ಅವು ಒಂದಕ್ಕೊಂದು ದೂರದಲ್ಲಿ ಇದ್ದುವು. ಬೇರೆ ಬೇರೆ ಮತಗಳ ಅನುಯಾಯಿಗಳಾಗಿದ್ದೂ ಈ ಜನರು ತಮ್ಮ ತಮ್ಮಲ್ಲಿ ಹೇಗೆ ಸದ್ಭಾವನೆಯಿಂದ ವ್ಯವಹಾರ ಮಾಡಬಲ್ಲರು ಎಂಬುದು ಗುರು ನಾನಕ ದೇವರ ಮುಂದೆ ಒಂದು ಕಠಿಣ ಸಮಸ್ಯೆಯಾಗಿತ್ತು. ಈ ಕಾರಣದಿಂದಾಗಿ, ಪರಮ ತತ್ತ್ವದ ಸಾಕ್ಷಾತ್ಕಾರವಾದ ಅನಂತರ ಅವರು ಉಚ್ಚರಿಸಿದ ಪ್ರಾರಂಭಿಕ ಶಬ್ದಗಳು ಇವು! "ಯಾವನೂ ಹಿಂದೂ ಇಲ್ಲ, ಯಾವನೂ ಮುಸಲ್ಮಾನನಲ್ಲ" ಇದರ ಭಾವಾರ್ಥವೆಂದರೆ – ವ್ಯಕ್ತಿ ಯಾವುದೇ ಧರ್ಮದ ಬಿಲ್ಲೆಯನ್ನು ಹಚ್ಚಿಕೊಳ್ಳಲಿ, ಎಲ್ಲ ಮಾನವರೂ ಸಮಾನರು ಮತ್ತು ಅವರು ತಮ್ಮ ವೈಯಕ್ತಿಕ ಕರ್ಮಕ್ಕೆ ಅನುಸಾರವಾಗಿಯೇ ಪರಮಾತ್ಮನ ಸನಿಹಕ್ಕೆ ಹೋಗಬಲ್ಲರು ಅಥವಾ ಅವನಿಂದ ದೂರವಾಗಿರುವರು. ಗುರು ನಾನಕರು ಜನರ ವಿಭಜನೆಯಲ್ಲಿ ದೇಶ, ತಳಿ, ಬಣ್ಣ ಅಥವಾ ಜಾತಿ ಭೇದವನ್ನು ಪೂರ್ಣವಾಗಿ ಅಲ್ಲಗಳೆದಿದ್ದಾರೆ. ಅವರು ಹೇಳುವುದೇನೆಂದರೆ ವ್ಯಕ್ತಿ ಎರಡು ಪ್ರಕಾರವಾಗಿದ್ದಾನೆ – ಗುರುಮುಖ ಮತ್ತು ಮನಮುಖ ಎಂದು, ಯಾರ ಧ್ಯಾನವು ಭಗವಂತನ ಕಡೆಗೆ ಇರುತ್ತದೆಯೊ, ಯಾರ ಜೀವನವು ಸತ್ಯ ಹಾಗು ಸೇವಾಭಾವನೆಯಿಂದ ಚೆನ್ನಾಗಿ ನಡೆದಿರುತ್ತದೆಯೋ, ಬೇರೆ ಬೇರೆ ವ್ಯಕ್ತಿಗಳು ಒಬ್ಬನೇ ಪರಮಪಿತನ ಮಕ್ಕಳೆಂದು ತಿಳಿದು ಅವರೊಡನೆ ಯಾರು ಪ್ರೇಮದ ಸಂಬಂಧವಿಟ್ಟುಕೊಂಡಿರುತ್ತಾರೋ ಅವರು ಗುರುಮುಖರು. ಯಾರು ಯಾವಾಗಲೂ ತಮ್ಮ ಸ್ವಂತ ಲಾಭದ ಕಡೆಗೇ ಗಮನವಿಟ್ಟುಕೊಂಡಿರುತ್ತಾರೋ ಮತ್ತು ಯಾರು ಪ್ರಾಪಂಚಿಕ ವಸ್ತುಗಳನ್ನು ಹಾಗು ಸ್ವಂತ ಸುಖಗಳನ್ನು ಪಡೆಯಲೋಸುಗ ಸುಳ್ಳು ಹೇಳುತ್ತಾರೋ, ಮೋಸ ಮಾಡುತ್ತಾರೋ ಯಾರು ಅಧರ್ಮಾಚರಣೆ ಮಾಡಲು ಸ್ವಲ್ಪವೂ ಹಿಂಜರಿಯುವುದಿಲ್ಲವೋ ಅವರು ಮನಮುಖರು. ಇಂಥ ಜನರು ಯಾವುದೇ ಧರ್ಮದ ರೀತಿ ವಾಡಿಕೆಗಳಂತೆ ನಡೆದರೂ ಅವರಿಗೆ ಇಹಲೋಕದಲ್ಲಿಯೂ, ಪರಲೋಕದಲ್ಲಿಯೂ ಶಾಂತಿ ಸಿಗದು.

ಈ ತಥ್ಯವನ್ನು ಕಾರ್ಯಾನ್ವಿತಗೊಳಿಸುವ ಉದ್ದೇಶದಿಂದ ಅವರು ತಮ್ಮ ವಿಚಾರ ಸರಣಿಯ ಪ್ರಚಾರ ಮಾಡತೊಡಗಿದರು. ಆಗ ಅವರು ತಮ್ಮೊಡನೆ ಬಾಲಾ ಎಂಬ ಒಬ್ಬ ಹಿಂದೂ ವ್ಯಕ್ತಿಯನ್ನೂ, ಮರದಾನ ಎಂಬ ಒಬ್ಬ ಮುಸಲ್ಮಾನ ವ್ಯಕ್ತಿಯನ್ನೂ ಕರೆದುಕೊಂಡು ಹೋದರು. ಈ ಇಬ್ಬರನ್ನೂ ಭಾಯೀ ('ಸಹೋದರ') ಎಂದು ಸಂಬೋಧಿಸಲಾಗುತ್ತಿತ್ತೆಂದು ಜ್ಞಾಪಿಸಿಕೊಳ್ಳಬೇಕು. ಸುಲತಾನಪುರದಿಂದ ತಮ್ಮ ಪ್ರಥಮ ಯಾತ್ರೆಯನ್ನು ಆರಂಭಿಸಿದಾಗ ಅವರು ಸೈದಪುರದಲ್ಲಿ ಭಾಯಿ ಲಾಲೋ ಅವರ ಮನೆಯಲ್ಲಿ ತಂಗಿದರು. ಬ್ರಾಹ್ಮಣ ಧರ್ಮ ಪಾಲಿಸುವವರ ದೃಷ್ಟಿಯಲ್ಲಿ ಭಾಯಿ ಲಾಲೋ ಶೂದ್ರ. ಈ ವಿಷಯವಾಗಿ ಜನರಲ್ಲಿ ಬಹಳ ಚರ್ಚೆಯಾಯಿತು. ಟೀಕೆ ಟಿಪ್ಪಣಿಗಳೂ ಆದವು. ಅಲ್ಲದೆ ಅವರು ಅದೇ ನಗರದ ದಿವಾಣರ ಮನೆಯಲ್ಲಿ ಏರ್ಪಡಿಸಿದ್ದ ಬ್ರಹ್ಮಭೋಜನಕ್ಕೂ ಹೋಗಲಿಲ್ಲ. ಇದರಿಂದಾಗಿ ಇನ್ನಷ್ಟು ಟೀಕೆ ಟಿಪ್ಪಣಿಗಳಾದವು. ಬ್ರಹ್ಮಭೋಜನದಲ್ಲಿ ಭಾಗವಹಿಸದೇ ಇದ್ದುದರ ಕಾರಣವನ್ನು ವಿಚಾರಿಸಿದಾಗ ಅವರು ದಿವಾಣ ಮಲಿಕ

ಭಾಗೋ ಅವರ ಸಮ್ಮುಖದಲ್ಲಿಯೆ ಹೇಳಿದರು: ಯಾವ ವಸ್ತುಗಳಿಂದ ಅಡಿಗೆ ತಯಾರಿಸಲಾಗಿದೆಯೋ ಆ ವಸ್ತುಗಳು ಪ್ರಾಮಾಣಿಕ ಗಳಿಕೆಯ ಹಣದಿಂದ ಕೊಂಡಿದ್ದವಲ್ಲ; ಜನತೆಯನ್ನು ಕಾಡಿ, ಪೀಡಿಸಿ ಪಡೆದ ವಸ್ತುಗಳಾಗಿದ್ದವು ಅವು. ಆದ್ದರಿಂದ ಅಡಿಗೆಯನ್ನು ಸಾಕಷ್ಟು ಶುಚಿಯಿಂದ ಮಾಡಿದ್ದರೂ, ಅದು ವಾಸ್ತವಿಕವಾಗಿ ಅಪವಿತ್ರವಾದದ್ದು. ಆದರೆ ಭಾಯಿ ಲಾಲೋನ ಮನೆಯಲ್ಲಿ ಮಾಡಿದ ರೊಟ್ಟಿ ಬೆವರು ಸುರಿಸಿ, ಪ್ರಾಮಾಣಿಕ ದುಡಿಮೆಯ ಹಣದಿಂದ ತಂದ ಧಾನ್ಯದ್ದಾಗಿರುವುದರಿಂದ ಪೂರ್ಣ ಪವಿತ್ರವಾದದ್ದು.

ಸಾಂಸಾರಿಕ ಉದ್ಯೋಗಗಳಲ್ಲಿ ತೊಡಿಕಿಕೊಂಡ ಯಾವ ವ್ಯಕ್ತಿಯೂ ಆತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲಾರನೆಂಬ ವಿಚಾರವು ಸಾಮಾನ್ಯವಾಗಿ ಹಿಂದೂಗಳಲ್ಲಿ ಮನೆಮಾಡಿಕೊಂಡಿತ್ತು. ಬಹುಶಃ ಈ ವಿಚಾರವು ಆಶ್ರಮ ಧರ್ಮವನ್ನು ಆಧರಿಸಿ ಮಾಡಿದ ಜೀವನ ವಿಭಜನೆಯ ಫಲಸ್ವರೂಪವಾಗಿ ಹುಟ್ಟಿರಬಹುದು. ಆಶ್ರಮ ಧರ್ಮಕ್ಕೆ ಅನುಸಾರವಾಗಿ ವ್ಯಕ್ತಿ ಬ್ರಹ್ಮಚಾರಿಯಾಗಿದ್ದು ಇಪ್ಪತ್ತೈದು ವರ್ಷ ವಿದ್ಯಾರ್ಜನೆ ಮಾಡಿ ಆಮೇಲೆ ಗೃಹಸ್ಥಾಶ್ರಮದಲ್ಲಿ ಇಪ್ಪತ್ತೈದು ವರ್ಷ ಗೃಹಧರ್ಮವನ್ನು ಪಾಲಿಸುತ್ತಿದ್ದನು ಐವತ್ತು ವರ್ಷ ವಯಸ್ಸಾದ ಬಳಿಕ ವಾನಪ್ರಸ್ತ ಆಶ್ರಮವು ಪ್ರಾರಂಭವಾಗಿ ಅದರಲ್ಲಿ ಧಾರ್ಮಿಕ ಪುಸ್ತಕಗಳು ಹೇಳಿದ ಮಾರ್ಗದಂತೆ ವಿಚಾರ ಮಾಡುವುದು ಮತ್ತು ಸತ್ಯದ ಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡುವುದು ಆವಶ್ಯಕ ಅಂಗಗಳೆಂದು ತಿಳಿಯಲಾಗುತ್ತಿತ್ತು. ಕೊನೆಯಲ್ಲಿ ಸಂನ್ಯಾಸ ಅರ್ಥಾತ್ ನಾಲ್ಕನೆಯ ಆಶ್ರಮದಲ್ಲಿ ಪ್ರವೇಶಿಸಿದಾಗ ಒಂದು ಬಗೆಯ ಸ್ವಾತಂತ್ರ್ಯವು ಮತ್ತೆ ಸಿಗುತ್ತಿತ್ತು. ಬೇಡಿ ಉಣ್ಣುವುದು ಮತ್ತು ಆಧ್ಯಾತ್ಮಿಕ ವಿಚಾರಗಳಲ್ಲಿ ತಲ್ಲೀನವಾಗಿರುವುದು ಮಾತ್ರ ಸಂನ್ಯಾಸಿಯ ಶೇಷ ಕರ್ತವ್ಯವಾಗಿರುತ್ತಿತ್ತು. ಇತರರಿಗೆ ಧರ್ಮೋಪದೇಶ ಮಾಡುವುದೂ ಸಂನ್ಯಾಸಿಯದೇ ಕರ್ತವ್ಯವಾಗಿತ್ತು. ಸಾವಕಾಶವಾಗಿ ಸಂನ್ಯಾಸಿಗಳು ಕಡಮೆ ವಯಸ್ಸಿನವರನ್ನೇ ಶಿಷ್ಯರನ್ನಾಗಿ ಮಾಡಿಕೊಳ್ಳಲಾರಂಭಿಸಿದರು. ದುಡಿಯದೆ, ವೇಷಭೂಷಣಗಳ ಆಧಾರದಿಂದಲೇ ಜೀವನದ ಆವಶ್ಯಕತೆಗಳನ್ನು ಪೂರ್ತಿ ಮಾಡಿಕೊಳ್ಳುವುದು ಇವರಿಗೆ ಬಹು ಒಳಿತಾಗಿ ತೋರತೊಡಗಿತು. ಹೀಗೆ ಅವರು ನಿಧಾನವಾಗಿ ಸಮಾಜಕ್ಕೆ ಆರ್ಥಿಕ ಭಾರವಾದರು. ಇವರ ಟೋಳಿಗಳು ತಮ್ಮ ಶಾರೀರಿಕ ಆವಶ್ಯಕತೆಗಳ ಪೂರ್ತಿಗಾಗಿ ಅಸ್ತ್ರ – ಶಸ್ತ್ರ ಹಿಡಿದುಕೊಂಡು ಜನರಿಂದ ಬಲಾತ್ಕಾರಪೂರ್ವಕವಾಗಿ ಊಟ – ಉಡಿಗೆಯ ಸಾಮಗ್ರಿಗಳನ್ನು ವಸೂಲು ಮಾಡತೊಡಗಿದವು. ಗುರು ನಾನಕ ದೇವರು ಸುಮೇರು ಪರ್ವತದ ಮೇಲೆ ಸಿದ್ಧರೊಡನೆ ಚರ್ಚಿಸುತ್ತ ಅವರಿಗೆ ಹೇಳಿದ್ದರು: "ಸಿದ್ಧರಂತೂ ಪರ್ವತಗಳಲ್ಲಿ ಬಂದು ಅಡಗಿಕೊಂಡಿದ್ದಾರೆ. ಈಗ ಜನತೆಗೆ ಒಳ್ಳೆಯ ಮಾರ್ಗದರ್ಶನ ಯಾರು ಮಾಡಬೇಕು?". ಈ ಎಲ್ಲ ಪರಿಸ್ಥಿತಿಯನ್ನು ಕುರಿತು ವಿಚಾರ ಮಾಡಿದ ಬಳಿಕ ಗುರೂಜೀಯವರು ತ್ಯಾಗದ ವಿರುದ್ಧವಾಗಿ ಪ್ರಚಾರ ಮಾಡಿದರು. ಗೃಹಸ್ಥನಾಗಿದ್ದುಕೊಂಡೂ ನಿಜವಾದ ಪ್ರಾಮಾಣಿಕ ಹಾಗು ಪವಿತ್ರ ಆಚರಣೆಯಿಂದ ಮನುಷ್ಯನು ಆತ್ಮೋನ್ನತಿಯನ್ನು ಮಾಡಿಕೊಳ್ಳಬಲ್ಲನು. ಮುಂಚೆ ಶ್ರೀ ಕೃಷ್ಣನು ಶ್ರೀಮದ್ಭಗವದ್ಗೀತೆಯಲ್ಲಿ ಕರ್ಮಯೋಗಿಯ ಆದರ್ಶವು ಸಂನ್ಯಾಸಕ್ಕಿಂತ ಶ್ರೇಷ್ಠತರವೆಂದು ಮನ್ನಿಸಿ ಉಪದೇಶಿಸಿದ್ದನು. ಆದರೆ ಸಾಮಾನ್ಯ ಜನತೆ ಈ ಉಪದೇಶದಿಂದ ಲಾಭ ಪಡೆಯದೆ ಹೋಯಿತು; ಹಿಂದೂಗಳಲ್ಲಿ ಧರ್ಮ ಮತ್ತು ಆತ್ಮೋನ್ನತಿಯ ಸರ್ವೋತ್ತಮ ವಿಚಾರಗಳು ಗುಪ್ತವಾಗಿಡಲಾಗುತ್ತಿದ್ದು ತಕ್ಕ ಅಧಿಕಾರಿ ವ್ಯಕ್ತಿಯ ಹೊರತು ಈ ರಹಸ್ಯವನ್ನು ಇನ್ನು ಯಾರಿಗೂ ಹೇಳಬಾರದೆಂದು ಹೇಳಲಾಗುತ್ತಿತ್ತು. ಸಾಮಾನ್ಯ ಹಿಂದೂ ಜನತೆ ಭ್ರಮೆಗಳಲ್ಲಿ, ರೂಢಿಗಳಲ್ಲಿ ಮತ್ತು ಕರ್ಮಕಾಂಡಗಳಲ್ಲಿ ಸಿಲುಕಿಕೊಂಡಿತ್ತು. ಅಸಂಖ್ಯ ದೇವಿ – ದೇವತೆಗಳನ್ನು ಧೂಪ, ದೀಪ, ನೈವೇದ್ಯಾದಿಗಳಿಂದ ಅರ್ಚಿಸಿದರೆ ಸಾಕು ಎಂದು ತಿಳಿಯಲಾಗುತ್ತಿತ್ತು. ಸಮಸ್ತ ಸಮಾಜದ ಸ್ಥಿತಿಯನ್ನು ಕುರಿತು ವಿಚಾರ ಮಾಡಿದ ಮೇಲೆ ಅದರ ಕುಂದು ಕೊರತೆಗಳನ್ನು ಹೋಗಲಾಡಿಸಿ, ಅದನ್ನು ಶಕ್ತಿಶಾಲಿಯನ್ನಾಗಿ ಮಾಡುವುದರ ಕಡೆಗೆ ಯಾರ ಧ್ಯಾನವೂ ಇದ್ದಿಲ್ಲ. ಮುಸಲ್ಮಾನರನ್ನು ಮ್ಲೇಚ್ಛರೆಂದು

ಕರೆಯುತೊಡಗಿದರು. ಅವರ ಕೂಡ ಊಟ ಮಾಡುವುದು, ಅವರು ಕೊಟ್ಟ ನೀರು ಕುಡಿಯುವುದು ಈ ಮುಂತಾದ ವ್ಯವಹಾರ ಇನಿತೂ ಇರಲಿಲ್ಲ. ಆದರೆ ಮುಸಲ್ಮಾನರ ಶಾಸನಗಳನ್ನು ಕಾರ್ಯರೂಪಕ್ಕೆ ತರುವವರು, ಮಹಂತರು, ದಿವಾಣರು ಮುಂತಾದವರು ವಿಶೇಷವಾಗಿ ಹಿಂದೂಗಳೇ ಆಗಿದ್ದರು. ಈ ಸಂಗ್ರಹದಲ್ಲಿ ಸಂಕಲನ ಮಾಡಿದ ಗುರೂಜೀಯ ಶಬ್ದಗಳನ್ನು ಲಕ್ಷ್ಯಗೊಟ್ಟು ಓದಿದ ಬಳಿಕ ಈ ಎಲ್ಲ ತಥ್ಯಗಳು ಸ್ಪಷ್ಟವಾಗಿ ದೃಷ್ಟಿಗೋಚರವಾಗುವವು.

ಗುರೂಜೀ ಪುರಾತನ ಸಂಸ್ಕೃತಿಯಲ್ಲಿ ಯಾವ ಯಾವ ಬದಲಾವಣೆಗಳನ್ನು ಮಾಡಿದರು ಮತ್ತು ಅವುಗಳ ಫಲಸ್ವರೂಪವಾಗಿ ಅವರ ಅನುಯಾಯಿಗಳು ಒಂದು ಶಕ್ತಿಶಾಲಿ ಸಮಾಜ – ಸಿಖ್ ಸಮಾಜವನ್ನು ಕಟ್ಟಲು ಹೇಗೆ ಸಮರ್ಥರಾದರು ಎಂಬುದನ್ನು ಈಗ ಹೇಳಲು ಯತ್ನಿಸುವೆವು.

ಭಾರತೀಯ ಧರ್ಮಗ್ರಂಥಗಳು ಪ್ರಾಯಃ 'ಓಂ' ಶಬ್ದದಿಂದ ಶುರುವಾಗುತ್ತವೆ. ವ್ಯಾಕರಣ ಶಾಸ್ತ್ರಜ್ಞರು ಈ ಶಬ್ದದ ಉತ್ಪತ್ತಿ 'ಅವ್' ಧಾತುವಿನಿಂದ ಆಗಿದೆಯೆಂದು ತಿಳಿಯುತ್ತಾರೆ. ಇದರ ಅರ್ಥವು 'ರಕ್ಷಿಸು' ಎಂದಾಗುತ್ತದೆಂದು ಒಪ್ಪುತ್ತಾರೆ. ಪ್ರೊಫೆಸರ್ ಮ್ಯಾಕ್ಸ್‌ಮುಲರ್ ಅವರು ಈ ಶಬ್ದವು ಸ್ವೀಕಾರೋಕ್ತಿಯ ದ್ಯೋತಕವಾಗಿದೆಯೆಂದು ಬರೆಯುತ್ತಾರೆ; ಅಲ್ಲದೆ, ಇದೇ ರೂಪದಲ್ಲಿ ಅಂದರೆ ಇಂದಿನ ಕಾಲದಲ್ಲಿ ನಾವು 'ಹಾಂ' ಅಥವಾ 'ಹೂಂ' ಎನ್ನುವ ತೆರದಲ್ಲಿ ಈ ಶಬ್ದದ ಉಪಯೋಗವಾಗುತ್ತಿತ್ತು. ಈ ಶಬ್ದವು ಸೃಷ್ಟಿಯ ಆರಂಭದಲ್ಲಿ ನಿರಂಕಾರನಿಂದ ಹುಟ್ಟಿತೆಂದೂ ಹಾಗು ಇದು ಸಮಸ್ತ ಸಂಸಾರದಲ್ಲಿ ವ್ಯಾಪ್ತವಾಗಿದೆಯೆಂದೂ ಯೋಗಿಗಳ ಅಭಿಪ್ರಾಯ. ಯಾವ ಪ್ರಕಾರ ನಾವು ಪಶುಗಳ ಹೆಸರನ್ನು ಅವುಗಳ ಕೂಗಿನಿಂದ ನಿರ್ಧರಿಸುತ್ತೇವೋ ಅದೇ ಪ್ರಕಾರವಾಗಿ ಈ ಶಬ್ದವು ಪರಮತತ್ತ್ವದ ದ್ಯೋತಕವಾಗಿ ಹೋಯಿತು. ಉಪನಿಷತ್ತುಗಳ ಕಾಲದಲ್ಲಿ ಈ ಶಬ್ದದ ಪ್ರಯೋಗವು ಈ ಅರ್ಥದಲ್ಲಿ ಚೆನ್ನಾಗಿ ಆಗ ತೊಡಗಿತು. ಆಮೇಲೆ ಕಾಲಾಂತರದಲ್ಲಿ ಈ ಶಬ್ದದಲ್ಲಿದ್ದ ಮೂರು ಅಕ್ಷರಗಳ – 'ಅ' 'ಉ' 'ಮ'ಗಳ – ಅರ್ಥವು ಬೇರೆ ಬೇರೆ ರೀತಿಯಲ್ಲಿ ಆಗತೊಡಗಿತು. ಈ ಮೂರೂ ಅಕ್ಷರಗಳು ಮೂರು ಅವಸ್ಥೆಗಳನ್ನು ಅಂದರೆ ಜಾಗೃತಿ, ಸ್ವಪ್ನ, ಸುಷುಪ್ತಿಗಳನ್ನು ಸೂಚಿಸುತ್ತವೆ ಎಂದು ಕೆಲವರು ಹೇಳತೊಡಗಿದರು. ಕೆಲವರು ಇವುಗಳಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ ಈ ತ್ರಿಮೂರ್ತಿಗಳನ್ನು ಕಾಣತೊಡಗಿದರು. ಗುರೂಜೀಯವರು ಇದಕ್ಕೆ (ಏಕ) ೧ ಅಂಕಿಯನ್ನು ಜೋಡಿಸಿ ಈ ಶಬ್ದವು ಕೇವಲ ಓರ್ವ ನಿರಂಕಾರನ ದ್ಯೋತಕವಾಗಿದೆ ಎಂದು ನಿರ್ಧರಿಸಿದರು. ಮತ್ತು ಈ "೧ಓ"ದ ಉಚ್ಚಾರ "ಏಕ ಓಂಕಾರ"ವು "ನಿರಂಕಾರವು ಕೇವಲ ಒಂದೇ" ಎಂಬುದನ್ನು ಸ್ಪಷ್ಟ ಮಾಡುತ್ತದೆ. ಅದೊಂದೇ ಪೂಜ್ಯವಾದದ್ದು. ಅವರು ತಮ್ಮ ಅನುಯಾಯಿಗಳು ಅನೇಕ ದೇವಿ ದೇವತೆಗಳ ಅಥವಾ ಬೇರೆ ಶಕ್ತಿಗಳ ಪೂಜೆ ಮಾಡುವುದನ್ನು ತಡೆದರು. ಅದು ಸತ್ಯರೂಪ ವೆಂದು ಇದಕ್ಕೆ ಮೊದಲೇ ಹೇಳಲಾಗುತ್ತಿದ್ದರೂ ಅದನ್ನು 'ಕರ್ತಾಪುರುಷ' ಎಂದು ಕರೆದು ಗುರು ಸಾಹೇಬರು ಷಡ್ ಶಾಸ್ತ್ರಗಳಿಂದ ತಮ್ಮ ಅಭಿಪ್ರಾಯ ಬೇರೆಯಾಗಿದೆಯೆಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟರು. ಸಾಂಖ್ಯವು ಈಶ್ವರನ ಅಸ್ತಿತ್ವವನ್ನೇ ಒಪ್ಪುವುದಿಲ್ಲ. ಯೋಗವು ಈಶ್ವರನ ಅಸ್ತಿತ್ವವನ್ನು ಒಪ್ಪುತ್ತದೆ, ಆದರೆ ಹಾಗೆಯೇ ಪುರುಷ ಮತ್ತು ಪ್ರಕೃತಿ ಅನಾದಿಯೆಂದು ಮನ್ನಿಸುತ್ತದೆ. ಅವು ಈಶ್ವರೋತ್ಪನ್ನವೆಂದು ಒಪ್ಪುವುದಿಲ್ಲ. ನ್ಯಾಯ ಮತ್ತು ವೈಶೇಷಿಕಗಳು ಈಶ್ವರನು ಪ್ರಪಂಚದ ಶಾಸಕನು ಮತ್ತು ಕರ್ಮಗಳ ಫಲಪ್ರದಾತನೆಂದು ಒಪ್ಪುತ್ತವೆ. ಆದರೆ ಅವನು ಪ್ರಪಂಚದ ನಿಮಿತ್ತ ಕಾರಣನು, ಉಪಾದಾನ ಕಾರಣನಲ್ಲ. ಅವುಗಳ ಮೇರೆಗೆ ಪರಮಾಣುಗಳು ಚಿರಸ್ಥಾಯಿ, ಅವೇ ಪ್ರಪಂಚದ ಹುಟ್ಟಿಗೆ ಕಾರಣ. ಜೈಮಿನಿ ತನ್ನ ಸೂತ್ರಗಳಲ್ಲಿ ಈಶ್ವರನನ್ನು ಉಲ್ಲೇಖಿಸುವುದೇ ಇಲ್ಲ. ಶಂಕರಾಚಾರ್ಯರು ಜೀವ ಮತ್ತು ಜಗತ್ತಿನ ಉತ್ಪತ್ತಿಯಲ್ಲಿ ಮಾಯೆಯ ಪ್ರಭಾವವನ್ನು ಮನ್ನಿಸುತ್ತಾರೆ. ಮಾಯೆ ಸತ್ಯವೂ ಅಲ್ಲ, ಅಸತ್ಯವೂ ಅಲ್ಲ;

ಅದು ಸತ್ಯಾಸತ್ಯ, ಆದರೆ ಅನಿರ್ವಚನೀಯವಾಗಿದೆ. ಅರ್ಥಾತ್ ಶಬ್ದಗಳಿಂದ ಅದನ್ನು ವರ್ಣಿಸುವದು ಅಸಾಧ್ಯ. ಮಾಯೆಯ ಪ್ರಭಾವದಿಂದ ಸೀಮಿತವಾಗಿ ಬ್ರಹ್ಮನದೇ ಜೀವವಾಯಿತು. ಬ್ರಹ್ಮನು ಅಕರ್ತನು ಮತ್ತು ತಟಸ್ಥನು. ಪ್ರಪಂಚವು ಮಾಯೆಯ ಆಟ. ಆದರೆ ಗುರು ನಾನಕ ದೇವರ ವಿಚಾರದ ಪ್ರಕಾರ ಜೀವ ಹಾಗು ಪ್ರಪಂಚವು ನಿರಂಕಾರನ ಅಪ್ಪಣೆಯ ಮೇರೆಗೆ ಅಸ್ತಿತ್ವಕ್ಕೆ ಬರುತ್ತವೆ.

ಪ್ರಪಂಚವು ಪ್ರಕೃತಿ ಅಥವಾ ಮಾಯೆಯ ಆಟ ಮಾತ್ರ ಎಂದು ತಿಳಿಯುವುದಲ್ಲದೆ ಪ್ರಕೃತಿ ಮತ್ತು ಮಾಯೆಯ ಬಲೆಯಿಂದ ಮುಕ್ತವಾಗುವವರೆಗೆ ಮನುಷ್ಯನು ತನ್ನ ನಿಜತ್ವವನ್ನು ತಿಳಿಯಲಾರನೆಂಬುದು ಸ್ಪಷ್ಟವಾಗಿದೆ. ಇದನ್ನು ಮನಗಂಡವರು ಪ್ರಾಪಂಚಿಕ ಕಾರ್ಯಗಳು ಒಂದು ಬಲೆಯೆಂದು ತಿಳಿದು ಅವುಗಳನ್ನು ತ್ಯಜಿಸುವುದೇ ಆತ್ಮೋನ್ನತಿಯ ಮೊದಲ ಹೆಜ್ಜೆ ಎಂದು ತಿಳಿಯತೊಡಗಿದರು. ಆದರೆ ಗುರೂಜೀಯವರು ಹೇಳಿದರು: ಸಮಸ್ತ ಚಕ್ರವು ಅಥವಾ ಹರವು 'ಆತನ' 'ಹುಕುಂ'ದ ಆಟ ಎಂದು ಹುಕುಮನ್ನು ಗುರುತಿಸಿ ಯಾವ ವ್ಯಕ್ತಿ ಸಂಸಾರಿಕ ಕಾರ್ಯಗಳಲ್ಲಿ 'ಅದ'ಕ್ಕೆ ಅನುಸಾರವಾಗಿ ಪ್ರವೃತ್ತನಾಗುತ್ತಾನೊ ಅವನ ಆತ್ಮವು ಉತ್ತರೋತ್ತರ ವಿಕಾಸೋನ್ಮುಖವಾಗುತ್ತದೆ; ಅವನ ಅಹಂ ನಷ್ಟಪ್ರಾಯವಾಗುತ್ತದೆ. ಹೇಳುವುದರ ತಾತ್ಪರ್ಯ ಇಷ್ಟೆ: ನಿಷ್ಕಾಮಕರ್ಮ ಒಂದು ಬಲೆಯಲ್ಲ; ಅದು ಆತ್ಮೋನ್ನತಿಯ ಸಾಧನ. ಈ ಕಾರಣದಿಂದಾಗಿ ಸಿಖ್ ಮತಾವಲಂಬಿಗಳು ಒಂದು ಕ್ರಿಯಾಶೀಲ ಸಮಾಜದ ರೂಪತಾಳಿದರು.

ಆ ಕರ್ತಾರನು ನಿರ್ಭಯನು ನಿರ್ವೈರನು; ಯಾರು ಆತನ ಪೂಜೆಯನ್ನು ಮಾಡುತ್ತಾರೋ ಅಥವಾ ಸಾಧನೆಯನ್ನು ಮಾಡುತ್ತಾರೊ ಅವರೂ ನಿರ್ಭಯರಾಗುತ್ತಾರೆ, ನಿರ್ವೈರರಾಗುತ್ತಾರೆ. ಅವನು ಅಯೋನಿ, ಅಂದರೆ ಜನಿಸುವುದಿಲ್ಲ. ಈ ಗುಣವು ಪರಮಾತ್ಮನ ಅವತಾರ ಸಿದ್ಧಾಂತವನ್ನು ಖಂಡಿಸುತ್ತದಲ್ಲದೆ ಅದರಿಂದ ಉತ್ಪನ್ನವಾದ ಮೂರ್ತಿಪೂಜೆಯನ್ನೂ ತೀವ್ರವಾಗಿ ವಿರೋಧಿಸುತ್ತದೆ. ಅವನು ಸ್ವಯಂಭೂ ಅರ್ಥಾತ್ ಸ್ವಯಂ ಪ್ರಕಾಶನು, ಯಾರೂ ಅವನನ್ನು ನಿರ್ಮಿಸಲಿಲ್ಲ.

ಜೀವಾತ್ಮನ ಉತ್ಪತ್ತಿಯೂ ಪರಮಾತ್ಮನಿಂದಲೇ. ಜೀವಾತ್ಮನು ಅವನದೇ ಅಂಶ. ಅವನ 'ಹುಕುಂ'ದಂತೆ ಜೀವನ ಕಳೆಯುತ್ತಿರುವ ವ್ಯಕ್ತಿಯಲ್ಲಿ ಆ ಜ್ಯೋತಿಯ ಅಂಶವು ಪ್ರಜ್ವಲಿಸುತ್ತದೆ; ಜೀವಾತ್ಮನ ಜ್ಯೋತಿಯಲ್ಲಿ ತಾನಾಗಿಯೆ ಒಂದಾಗಿ ಬೆರೆತು ಹೋಗುತ್ತಾನೆ. ಜೀವಜ್ಯೋತಿ ಪರಮಾತ್ಮನ ರೂಪವನ್ನು ತಾಳುತ್ತದೆ. ಆದರೆ ವೇದಾಂತಿಗಳು ಒಪ್ಪುವಂತೆ ಅದು ಬಹ್ಮವಾಗುವದಿಲ್ಲ. 'ಜಪುಜೀ'ಯಲ್ಲಿ ಗುರೂಜೀಯವರು ಒಂದು ಉದಾಹರಣೆ ಕೊಟ್ಟು ಇದನ್ನು ಚೆನ್ನಾಗಿ ತಿಳಿಸಿದ್ದಾರೆ: ಯಾವ ಪ್ರಕಾರವಾಗಿ ನದಿಗಳು, ಕಾಲುವೆಗಳು ಸಮುದ್ರದ ವರೆಗೆ ಹೋಗಿ ಅದರಲ್ಲಿ ಬೆರೆತು ಹೋದರೂ ಅದರ ಪಾರಾವಾರವನ್ನು ಹೇಗೆ ಅರಿಯುವುದಿಲ್ಲವೋ, ಅದೇ ಪ್ರಕಾರವಾಗಿ ಭಕ್ತ ಜನರೂ 'ಅವ'ನೊಡನೆ ಏಕಾತ್ಮವಾದ ಅನಂತರವೂ 'ಅವನ' ಆಳವನ್ನು ಅರಿಯರು.

ಸಾಧನ ಪಕ್ಷದ ಸಂಬಂಧವಾಗಿ ಹೇಳುವುದಾದರೆ, ತನ್ನ ಅಂತಿಮ ಅಂಗವೇ ಸಮಾಧಿಯಾಗಿದ್ದ ಯೋಗದ ನೆರವನ್ನು ಎಲ್ಲ ಋಷಿಮುನಿಗಳೂ ಪಡೆದಿದ್ದಾರೆ ಎಂದು ಹೇಳಬಹುದು. ಸಮಾಧಿಯಲ್ಲಿ ನೈಪುಣ್ಯ ಪಡೆಯಬೇಕಾದರೆ ಏಕಾಂತ ಸ್ಥಳಕ್ಕೆ ಹೋಗಿ ಸಾಧನೆ ಮಾಡಬೇಕೆಂದು ಉಪನಿಷತ್ ಕಾಲದಿಂದಲೇ ಉಪದೇಶ ಮಾಡಲಾಗಿದೆ ಅಥವಾ ಆದೇಶವೀಯಲಾಗಿದೆ. ಸ್ವಾಮಿ ವಿವೇಕಾನಂದರು ಯೋಗ ಸೂತ್ರಗಳ ಇಂಗ್ಲಿಷ ಅನುವಾದ 'ರಾಜಯೋಗ'ದ ಒಂದು ಪರಿಶಿಷ್ಟದಲ್ಲಿ ಶ್ವೇತಾಶ್ವರ ಉಪನಿಷತ್ತಿನಲ್ಲಿಯ ಒಂದು ಉದಾಹರಣೆಯನ್ನು ಕೊಟ್ಟಿದ್ದಾರೆ. ಅದರಲ್ಲಿ ಬರೆಯಲಾಗಿದೆ: "ಕಲ್ಲು, ಮರಳು ಇಲ್ಲದೆ ಸಮನಾಗಿರುವ ನೆಲದಿಂದ ಕೂಡಿದ ಪರ್ವತಗಳಲ್ಲಿನ ಗುಹೆಗಳಲ್ಲಾಗಲೀ, ಜನರ ಗಲಾಟೆ ಅಥವಾ ಜಲ-ಪ್ರಪಾತದ ಗರ್ಜನೆಯಿರದ, ಮನಸ್ಸಿಗೆ ಅನುಕೂಲವಾಗಿರುವ ಮತ್ತು ಕಣ್ಣಿಗೆ ಆನಂದವೆನಿಸುವ ಸ್ಥಳಗಳಲ್ಲಿ ಮನಸ್ಸನ್ನು



 

ಅವನೊಡನೆ ಜೋಡಿಸುವದು, ಧ್ಯಾನಮಗ್ನವಾಗುವುದು ಅಥವಾ ಯೋಗಸಾಧನ ಮಾಡುವುದು ಯೋಗ್ಯವಾದದ್ದು".

ವ್ಯಕ್ತಿಯ ಮನದಲ್ಲಿ ಎರಡು ಅಂಶಗಳಿವೆ – ಧ್ಯಾನ ಮತ್ತು ಸ್ಮರಣ. ಧ್ಯಾನ ಹತ್ತುವದು ಏಕಾಂತ ಸ್ಥಳಗಳಲ್ಲಿ ನಿಶ್ಚಲವಾಗಿ ಕುಳಿತುಕೊಳ್ಳುವದರಿಂದಲೇ. ಆದರೆ ಸ್ಮರಣವು ಕಾರ್ಯದಲ್ಲಿ ತೊಡಗಿದ್ದರೂ ಯಾವುದಾದರೂ ಒಂದು ಸಂಕಲ್ಪದಲ್ಲಿ ತೊಡಗಿಕೊಂಡಿರಬಹುದು. ಸಾಧನ ಪಕ್ಷದಲ್ಲಿ ಸ್ಮರಣೆಯಿಂದಲೇ ಕಾರ್ಯ ಮಾಡಿಕೊಳ್ಳಬೇಕೆಂದು ಗುರೂಜೀಯವರು ಉಪದೇಶ ಮಾಡಿದ್ದಾರೆ. ಮನುಷ್ಯನು ತನ್ನ ಕರ್ತಾರನಾದ ಪರಮಾತ್ಮನನ್ನು ಮರೆತು ಹೋಗಿದ್ದಾನೆ. ಆದ್ದರಿಂದಲೇ ಅವನು ದುಃಖ ಪಡುತ್ತಿದ್ದಾನೆ. ಪರಮಾತ್ಮನು ಸರ್ವವ್ಯಾಪಿ. ಸ್ಮರಣದಿಂದ ಜಿಜ್ಞಾಸು ಈ ತಥ್ಯವನ್ನು ತನ್ನ ಚೇತನದಲ್ಲಿ ಸ್ಥಾಪಿಸಿಕೊಂಡಾಗ, ಅವನು ಪಾಪ ಕರ್ಮವನ್ನು ಮಾಡಲಾರನು, ಅವನ ಅಂತರಾತ್ಮನಲ್ಲಿ ಜ್ಯೋತಿ ಪ್ರಜ್ವಲಿತವಾಗುವುದು. ಯೋಗಸಾಧನೆಯ ಅಂಗಗಳು ಎಂಟು. ಗುರು ನಾನಕರೂ ಅಷ್ಟಾಂಗ ಸಾಧನೆಯನ್ನು ಉಪದೇಶಿಸಿದ್ದಾರೆ. ಗುರು ಸಾಹೇಬರ ಮೇರೆಗೆ ಪ್ರಥಮ ಅಂಗವು ಸಂತೋಷ, ಎರಡನೆಯದು ಸೇವೆ. ಮೂರನೆಯ ಅಂಗವು ಗುರವಾಣಿಯ ಪಾಠ ಹಾಗು ಗುರು ಉಪದೇಶದಂತೆ ಆಚರಣೆಯನ್ನಿಟ್ಟುಕೊಂಡಿರಲು ಪ್ರಯತ್ನ. ಇದರ ಅನಂತರ ಸತ್ಸಂಗ ಹಾಗು ಕೀರ್ತನೆಗಳ ಸ್ಥಾನ. ಸಂಗೀತದಲ್ಲಿ ಮನಸ್ಸನ್ನು ಏಕಾಗ್ರಗೊಳಿಸುವ ಶಕ್ತಿಯಿದೆ, ಏಕಾಗ್ರಚಿತ್ತರಾಗಿ ವಾಣಿಯನ್ನು ಆಲಿಸಿದರೆ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವಾಗುತ್ತದೆ. ಇದರ ಅನಂತರ ನಾಮ ಜಪ, ಮತ್ತು ಆಮೇಲೆ ಸ್ಮರಣೆ.

ಪವಿತ್ರ ಮನಸ್ಸಿನಲ್ಲಿ ಮಾತ್ರ ನಾಮವು ನೆಲೆಸಲು ಸಾಧ್ಯ. ಈ ಕಾರಣದಿಂದಾಗಿ ಅವರು ಯಾವ ಧರ್ಮದ ಉಪದೇಶ ಮಾಡಿದರೂ ಅದಕ್ಕೆ ಸದಾಚಾರದ ಅಡಿಗಲ್ಲನ್ನು ಹಾಕಿದರು. ರೂಢಿಗಳು ಅಥವಾ ಕರ್ಮಕಾಂಡವು ಸತ್ಯವನ್ನು ಗ್ರಹಿಸಲಿಕ್ಕೆ ಮನಸ್ಸಿಗೆ ನೆರವಾಗುವುದಿಲ್ಲ, ಆದ್ದರಿಂದ ಅವು ವ್ಯರ್ಥ.

ಈಶ್ವರನೇ ಎಲ್ಲದರ ಕರ್ತ. ಎಲ್ಲರ ಅಂತಃಕರಣದಲ್ಲಿ ಅವನ ಜ್ಯೋತಿ ಇದೆ. ಎಲ್ಲರೂ ಸಮಾನರು; ಮೇಲು – ಕೀಳು ಅಥವಾ ಅಸ್ಪೃಶ್ಯರು ಎಂದು ಯಾರು ಇಲ್ಲ. ಗುರು ನಾನಕರ ಉಪದೇಶವು ಸರ್ವರಿಗೂ ಸಮಾನವಾಗಿದೆ. ಅದು ಕೇವಲ ಪುರುಷರ ಸಲುವಾಗಿಯೂ ಇಲ್ಲ! ಸ್ತ್ರೀಯರ ಸಲುವಾಗಿಯೂ ಇಲ್ಲ. ವೇದ ಅಥವಾ ಉಪನಿಷತ್ ಕಾಲದಲ್ಲಿ ಸ್ತ್ರೀಯ ಸ್ಥಾನವು ಏನೇ ಇದ್ದಿರಲಿ, ಗುರೂಜೀಯ ಕಾಲದಲ್ಲಿ ನಿಶ್ಚಯವಾಗಿಯೂ ಸ್ತ್ರೀಯರು ಶೂದ್ರರೆಂದು ತಿಳಿಯಲಾಗುತ್ತಿತ್ತು ಹಾಗೂ ಅವರನ್ನು ವಿದ್ಯಾಹೀನರನ್ನಾಗಿ ಮಾಡಿ ಇಡುತ್ತಿದ್ದರು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಗುರೂಜೀಯವರು ಇದನ್ನು ಬಲವಾಗಿ ವಿರೋಧಿಸಿದರು. ಸ್ತ್ರೀ – ಪುರುಷರಿಬ್ಬರಿಗೂ ಈ ಮಾರ್ಗದ ಮೇಲೆ ನಡೆಯಲು ಸಮಾನ ಅಧಿಕಾರವಿದೆಯೆಂದು ಅವರು ಸ್ಪಷ್ಟವಾಗಿ ಹೇಳಿದರು. ಗೋರಖನಾಥರು ಸ್ತ್ರೀಯರ ವಿಷಯದಲ್ಲಿ ಬಹಳ ಕಟು ಶಬ್ದಗಳನ್ನಾಡಿದ್ದರು.[1] ಗುರು ನಾನಕರು ಆ ಶಬ್ದಗಳನ್ನು ಕುರಿತು ತಮ್ಮ ತೀವ್ರ ಅಸಮ್ಮತಿಯನ್ನು ವ್ಯಕ್ತಗೊಳಿಸಿ – 'ಸಮಸ್ತ ಪುರುಷ ಜಾತಿಗೆ ತಾಯಿಯಾಗಿದ್ದ ಸ್ತ್ರೀ ಹೇಗೆ ಕೀಳೆನಿಸಬಲ್ಲಳು !' ಎಂದು ನುಡಿದರು.

ಅವರು ಲೋಕಭಾಷೆಯಲ್ಲಿ ಉಪದೇಶ ಮಾಡಿ ಜನರಿಗೆ ಸನ್ಮಾರ್ಗದಲ್ಲಿ ನಡೆಯಲು ಪ್ರೇರೇಪಿಸಿದರು. ಜಾತಿವಾದ, ವರ್ಣವ್ಯವಸ್ಥೆಯ ಭೇದ ಮತ್ತು ನಿವೃತ್ತಿ ಮಾರ್ಗವನ್ನು ವಿರೋಧಿಸಿ ಎಲ್ಲರಿಗೂ ಸಮಾನಾಧಿಕಾರವನ್ನಿತ್ತು, ಜನವಾದಿ ಶಕ್ತಿಯನ್ನು ಪಡೆದು, ಅತ್ಯಾಚಾರ ಬಲಾತ್ಕಾರವನ್ನು ನಾಶ ಮಾಡುವಲ್ಲಿ ಪೂರ್ಣ ಯಶಸ್ವಿಯಾದ ಸಮಾಜಕ್ಕೆ ತಳಹದಿಯನ್ನು ಹಾಕಿದರು.

---

1. 'ಗೊರಖವಾಣಿ' ಪ್ರೊ. ಪೀತಾಂಬರದತ್ತ ವಥಥ್ವಾಲರಿಂದ ಸಂಕಲಿತ ಪದ್ಯ, 43 – ನೋಡಿ.



 

ಸರ್ವರ ಸೇವೆಯನ್ನು ತನ್ನ ಕೈಯಿಂದ ಮಾಡಲು, ದುಡಿಮೆಯಿಂದ ತನ್ನ ಉಪಜೀವನ ಸಾಗಿಸಲು. ಮತ್ತು ಅಗತ್ಯವಿದ್ದವರಿಗೆ ಸಹಾಯ ಮಾಡಲು ಪ್ರತಿಯೊಬ್ಬ ಶ್ರದ್ಧಾವಂತನಿಗೆ ಉಪದೇಶ ಮಾಡಿದರು, ಸತ್ಯದ ರಕ್ಷಣೆಗೋಸ್ಕರ ಅಗತ್ಯ ಬಿದ್ದರೆ ಕತ್ತಿಯನ್ನು ಹಿರಿಯಲು ಹಿಂಜರಿಯಬಾರದೆಂದೂ ಬೇರೆಯವರಿಗೂ ಈ ಮಾರ್ಗದಲ್ಲಿ ನಡೆಯಲು ಪ್ರೇರಿಸಬೇಕೆಂದೂ ಹೇಳಿದರು. ಅರ್ಥಾತ್ ಒಬ್ಬನೇ ವ್ಯಕ್ತಿಯಲ್ಲಿ ಶೂದ್ರ, ವೈಶ್ಯ, ಕ್ಷತ್ರಿಯ ಮತ್ತು ಬ್ರಾಹ್ಮಣ ಧರ್ಮವನ್ನು ಅಳವಡಿಸುವುದು ಗುರುಗಳದೇ ಕೆಲಸವಾಗಿತ್ತು. ಈ ಮೊದಲು ಸಹ ಕಬೀರ, ರಾಮಾನಂದ, ಚೈತನ್ಯ ಮುಂತಾದ ಭಕ್ತರು ಧಾರ್ಮಿಕ ಕ್ಷೇತ್ರದಲ್ಲಿ ಮೇಲು–ಕೀಳೆಂಬ ಭೇದವನ್ನು ಕೊನೆಗೊಳಿಸಲು ಉಪದೇಶ ಮಾಡಿದ್ದರು. ಆದರೆ ಅವರು ಶಾಸನದ ವಿರುದ್ಧವಾಗಿ ಎಂದೂ ಏನನ್ನೂ ಹೇಳಿದ್ದಿಲ್ಲ; ಗುರು ಗ್ರಂಥ ಸಾಹೇಬದಲ್ಲಿ ಸಂಕಲಿತವಾಗಿರುವ ಕಬೀರ ಮತ್ತು ನಾಮದೇವರ ವಾಣಿಗಳಿಂದ ರಾಜ್ಯಾಧಿಕಾರದಿಂದ ಅವರ ಮೇಲೆ ಅತ್ಯಾಚಾರವಾಗಿತ್ತೆಂಬ ಸ್ಪಷ್ಟ ಸಂಕೇತವು ದೊರೆಯುತ್ತದೆಯಾದರೂ ಅವರು ಅಂಥ ಶಾಸನವನ್ನು ವಿರೋಧಿಸಿದ್ದಿಲ್ಲ. ಗುರು ನಾನಕರು ಸ್ಪಷ್ಟಶಬ್ದಗಳಲ್ಲಿ ಆ ಕಾಲದ ಶಾಸನ, ನ್ಯಾಯ ವ್ಯವಸ್ಥೆ ಹಾಗೂ ಪ್ರಜೆಗಳ ಕೂಡ ನಡೆಸುತ್ತಿದ್ದ ವ್ಯವಹಾರಗಳನ್ನು ಟೀಕಿಸಿದ್ದಾರೆ. ಅವರು ಅನ್ಯಾಯದ ವಿರುದ್ಧವಾಗಿ ಎತ್ತಿದ ಧ್ವನಿಯಿಂದ ಜನರ ಗಮನವು ತಮ್ಮ ಶೋಚನೀಯ ಸ್ಥಿತಿಯ ಕಡೆಗೆ ಹೋಯಿತು. ಮತ್ತು ಕೆಲವು ಸಮಯದ ಅನಂತರ ಈ ಅತ್ಯಾಚಾರಗಳನ್ನು ತೊಡೆದುಹಾಕಲು ಜನತೆ ಸಿದ್ಧವಾಯಿತು. ಅವರು ಬಾಬರನ ಆಕ್ರಮಣದ ವಿಷಯದಲ್ಲಿ ಆಡಿದ ಶಬ್ದಗಳಲ್ಲಿ ದೇಶವಾಸಿಗಳ ಬಗ್ಗೆ ಇದ್ದ ಅವರ ಹಾರ್ದಿಕ ಸ್ನೇಹವು ಯಾವ ಸಾಂಪ್ರದಾಯಿಕ ಭೇದ ಭಾವವಿಲ್ಲದೆ ಅಭಿವ್ಯಕ್ತವಾಗಿದೆ. ಫಲಸ್ವರೂಪವಾಗಿ ಪರಸ್ಪರ ಕಟ್ಟಾ ವಿರೋಧಿಗಳಾಗಿದ್ದ ಹಿಂದೂ–ಮುಸಲ್ಮಾನರು ಅವರನ್ನು ಪ್ರೀತಿಸತೊಡಗಿದರು. ಅವರು ಪರಮತತ್ತ್ವದಲ್ಲಿ ಲೀನವಾಗುವ ಸಮಯದಲ್ಲಿ ಇಬ್ಬರಲ್ಲಿ ಜಗಳವಾಗಿ ಹೋಯಿತು. ಹಿಂದೂಗಳು ಅವರು ಹಿಂದೂ ಎಂದು ತಿಳಿಯುತ್ತಿದ್ದರು, ಮುಸಲ್ಮಾನರು ಅವರು ಮುಸಲ್ಮಾನರೆಂದು ತಿಳಿಯುತ್ತಿದ್ದರು. ಯಾವ ಸಮಾಜವನ್ನು ಅವರು ಸ್ಥಾಪಿಸಿದರೋ ಆ ಸಮಾಜದ ಪ್ರತಿನಿತ್ಯದ ಅರದಾಸ ಅರ್ಥಾದ್ ಪ್ರಾರ್ಥನೆ ಈ ಶಬ್ದಗಳಲ್ಲಿ ಕೊನೆಗೊಳ್ಳುತ್ತದೆ:

"ನಾನಕ ನಾಮು ಚಢದೀ ಕಲಾ
ತೇರೆ ಭಾಣೆ ಸರಬತ್ತ ದಾ ಭಲಾ"

ಇದರ ಭಾವಾರ್ಥ ಹೀಗಿದೆ: ನಮಗೆ ನಾಮ ಮತ್ತು ಚಢದೀ ಕಲಾ ಅಂದರೆ ಸದಾ ಆಶಾವಾದಿಗಳು ಆಗಿರಬೇಕೆಂದು ಆಶೀರ್ವದಿಸು. ಸಮಸ್ತ ಸಂಸಾರದ ಕಲ್ಯಾಣವಾಗಲೆಂದೇ ನಿನ್ನ ಪ್ರಭಾವಶಾಲಿ ಶುಭೇಚ್ಛೆಯಾಗಿರಲಿ

ಭಾಗ ಒಂದು

# ಪರಾಭೌತಿಕ ಸಿದ್ಧಾಂತ

## ಈಶ್ವರ

1 ಓಂಕಾರ, ಸತಿನಾಮು, ಕರತಾಪುರುಖ, ನಿರಭಉ, ನಿರವೈರು,
ಅಕಾಲಮೂರತಿ, ಅಜೂನಿ, ಸೈಭಂಗ ಗುರುಪ್ರಾಸಾದಿ[1] ॥

1. 'ಓಂ' ಎಂದು ವಾಚಕವಾಗಿರುವ ಪರಮತತ್ವ ಒಬ್ಬನೇ. ಅವನು ಸತ್ಯನು ಅಥವಾ ಯಾವಾಗಲೂ ಇರತಕ್ಕವನು. ಅವನು ಸೃಷ್ಟಿಕರ್ತನು ಹೇಗೋ ಹಾಗೆ ಅದರಲ್ಲಿ ವ್ಯಾಪ್ತನೂ ಹೌದು. ಅವನು ನಿರ್ಭಯನು. ಯಾರೊಡನೆಯೂ ಅವನ ಹಗೆತನವಿಲ್ಲ. ಅವನ ಅಸ್ತಿತ್ವದ ಮೇಲೆ ಕಾಲದ ಪ್ರಭಾವವಿಲ್ಲ. ಅವನು ಜನಿಸುವದಿಲ್ಲ; ಅವನು ಸ್ವಯಂ ಪ್ರಕಾಶನು. ಗುರುಕೃಪೆಯಿಂದ ಅವನ ಸಾಕ್ಷಾತ್ಕಾರವು ಸಾಧ್ಯ.

— ಮೂಲ ಮಂತ್ರ, ಜಪು ॥



 

## ಅಕಾಲ ಪುರುಷ ಕೀ ಏಕತಾ

(೧)

ದೂಜೀ ಮಾಇಆ ಜಗತ ಚಿತ ವಾಸು ॥ ಕಾಮ ಕ್ರೋಧ ಅಹಂಕಾರ ಬಿನಾಸು ॥ ೧ ॥
ದೂಜಾ ಕಉಣು ಕಹಾ ನಹೀ ಕೋಈ ॥ ಸಭ ಮಹਿ ಎಕು ನಿರಂಜನು ಸೋಈ ॥ ರಹಾਉ ॥
ದೂಜೀ ದುರಮತಿ ಆಖೈ ದೋಇ ॥ ಆವೈ ಜಾಈ ಮರಿ ದೂಜಾ ಹೋಇ ॥ ೨ ॥
ಧರಿಣಿ ಗಗನಿ ನಹ ದೇಖಉ ದೋಇ ॥ ನಾರೀ ಪುರುಖ ಸಬಾಈ ಲೋಇ ॥ ೩ ॥
ರವಿ ಸಸಿ ದೇಖಉ ದೀಪಕ ಉಜಿಆಲಾ ॥ ಸರಬ ನಿರಂತರಿ ಪ್ರೀತಮು ಬಾಲಾ ॥ ೪ ॥
ಕರಿ ಕಿರಪಾ ಮೇರಾ ಚಿತು ಲಾಇಆ ॥ ಸತಿಗುರಿ ಮೋ ಕಉ ಏಕ ಬುಝಾಇಆ ॥ ೫ ॥
ಏಕು ನಿರಂಜನು ಗುರುಮುಖಿ ಜಾತಾ ॥ ದೂಜಾ ಮಾರಿ ಸಬದಿ ಪಛಾತಾ ॥ ೬ ॥
ಏಕೊ ಹುಕಮು ಬರತೈ ಸಭ ಲೋಈ ॥ ಏಕಸು ತೆ ಸಭಿ ಓಪತಿ ಹೋಈ ॥ ೭ ॥
ರಾಹ ದೋವೈ ಖಸಮು ಏಕೊ ಜಾಣು ॥ ಗುರ ಕೈ ಸಬದಿ ಹುಕಮು ಪಛಾಣು ॥ ೮ ॥
ಸಗಲ ರೂಪ ವರನ ಮನಮಾಹೀ ॥ ಕಹು ನಾನಕ ಏಕೊ ಸಾಲಾಹೀ ॥ ೯ ॥

ಗಉಡೀ ಅಸಟಪದೀಆ

(೨)

ಏಕೊ ಏಕ ಕಹೈ ಸಭು ಕೋಈ ಹಉಮೈ ಗರಬು ವಿಆಪೈ ॥
ಅಂತರಿ ಬಾಹರಿ ಏಕು ಪಛಾಣಾ ಇಉ ಘರು ಮಹಲು ನಿಞಾಪೆ ॥
ಪ್ರಭು ನೇಡೈ ಹರಿ ದೂರಿ ನ ಜಾಣಹು ಏಕೊ ಸೃಸಟಿ ಸಬಾಈ ॥
ಏಕಂಕಾರ ಅವರು ನಹೀ ದೂಜಾ ನಾನಕ ಏಕ ಸಮಾಈ ॥

ರಾಮಕಲೀ ದಖಣೀ, ಓಅಂಕಾರ

(೩)

ಏಕ ಅಚಾರು ರಂಗ ಇಕು ರೂಪು ॥ ಪಉಣು ಪಾಣೀ ಅಗನೀ ಅಸರೂಪು ॥
ಏಕೋ ಭವರು ಭವೈ ತಿಹು ಲೋಇ ॥ ಏಕೊ ಬೂಝೈ ಸೂಝೈ ಪತಿ ಹೋಈ ॥
ಗಿಆನು ಧಿಆನು ಲೆ ಸಮಸರಿ ರಹೈ ॥ ಗುರುಮುಖಿ ಏಕು ವಿರಲಾ ಕೋ ಲಹೈ ॥
ಜಿಸನೊ ದೇಇ ಕಿರಪಾ ತೆ ಸುಖು ಪಾಏ ॥ ಗುರು ದುಆರೈ ಆಖಿ ಸುಣಾಏ ॥ ೭ ॥

ರಾಮಕಲೀ ದಖಣೀ, ಓಅಂಕಾರ

# ಅಕಾಲಪುರುಷನ ಐಕ್ಯ

(೧)

ಮಾಯೆಯಿಂದ ದ್ವೈತಭಾವ ಜಗದ ಚಿತ್ತದಲ್ಲಿ ಬಂದು ನೆಲಸುವುದು. ಕಾಮ ಕ್ರೋಧ, ಅಹಂಕಾರದಿಂದ ವಿನಾಶ ಆಗುವದು. ನೀನಲ್ಲದೆ ಬೇರಾರು ಇರುವರು ? ಎಲ್ಲಿರುವರು? ಎಲ್ಲರಲ್ಲಿ ಅವನೊಬ್ಬನೇ ನಿರಂಜನನಾಗಿ ಇರುವನು. ಇಬ್ಬರೆಂದು ಹೇಳುವದು ದುರ್ಬುದ್ಧಿ. ಜೀವವು ಬರುವದು, ಸಾಯುವುದು, ಇನ್ನೊಂದಾಗುವುದು. ಭೂಮಿಯಲ್ಲಿ, ಆಕಾಶದಲ್ಲಿ ಸಮಸ್ತ ಲೋಕಗಳ ನರನಾರಿಯರಲ್ಲಿ ನನಗೆ ಬೇರೆ ಯಾರೂ ಕಾಣಿಸುವುದಿಲ್ಲ. ಸೂರ್ಯ – ಚಂದ್ರರ ಪ್ರಜ್ವಲಿತ ದೀಪಗಳಲ್ಲಿ ನಿರಂತರವಾಗಿ ನನ್ನ ಒಲುಮೆಯ ಪ್ರಿಯತಮನನ್ನೇ ನಾನು ನೋಡುವೆ. ಅವನು ಕರುಣೆತೋರಿ ನನ್ನ ಚಿತ್ತವನ್ನು ತನ್ನಲ್ಲಿ ಲೀನಗೊಳಿಸಿ ಕೊಂಡಿರುವ. ಸದ್ಗುರವು ನನಗೊಬ್ಬನನ್ನೇ ತೋರಿರುವನು. ಗುರುವಿನ ಉಪದೇಶದಿಂದ ಒಬ್ಬ ನಿರಂಜನನನ್ನೇ ಅರಿತಿರುವೆ. ದ್ವೈತವನ್ನು ಸಾಯಿಸಿರುವೆ, ಶಬ್ದವನ್ನು ಅರಿತಿರುವೆ. ಅವನೊಬ್ಬನದೇ ಹುಕುಮು ನಡೆಯುತ್ತಲಿದೆ ಸರ್ವಲೋಕಗಳಲ್ಲಿ. ಒಬ್ಬನಿಂದಲೇ ಎಲ್ಲರ ಹುಟ್ಟು. ದಾರಿಗಳು ಎರಡು, ಸ್ವಾಮಿ ಒಬ್ಬನೇ ಎಂದು ತಿಳಿದುಕೊಳ್ಳಿರಿ. ಗುರುವಿನ ಉಪದೇಶದಿಂದ ಹುಕುಮನ್ನು ಗುರುತಿಸಿರಿ. ಸಕಲ ರೂಪ ಗಳೂ ವರ್ಣಗಳೂ ಇರುವುದು ಮನದಲ್ಲಿಯೆ. ಅವನೊಬ್ಬನೇ ಸ್ತುತ್ಯನೆಂದು ನಾನಕನು ಹೇಳುತ್ತಾನೆ.

(೨೨೩)

(೨)

ಅವನು ಒಬ್ಬನೇ, ಒಬ್ಬನೇ ಎಂದು ಎಲ್ಲರೂ ಹೇಳುವವರೇ. ಆದರೆ ಗರ್ವ, ಅಹಂಕಾರ ಎಲ್ಲೆಡೆ ವ್ಯಾಪಿಸಿರುವುದು. ಒಳಗೂ ಹೊರಗೂ ಒಬ್ಬನೇ ಇರುವನೆಂದು ಅರಿತರೆ ಅವನ ಅರಮನೆ ಎಲ್ಲಿರುವು ದೆಂಬುದು ತಿಳಿಯುವುದು. ಪ್ರಭು ಹತ್ತಿರವಿರುವನು. ಅವನು ದೂರವಿರುವನೆಂದು ತಿಳಿಯಬೇಡ. ಸಮಸ್ತ ಸೃಷ್ಟಿಯೂ ಒಂದೇ. ಒಂದು ಓಂಕಾರದ ಹೊರತು ಬೇರೊಂದಿಲ್ಲ. ಅವನೊಬ್ಬನೇ ಎಲ್ಲೆಡೆಯಲ್ಲಿ ತುಂಬಿರುವನು ಎಂದು ನಾನಕನು ಹೇಳುತ್ತಾನೆ.

(೭೩೦)

(೩)

ಒಂದೇ ಆಚಾರ, ಬಣ್ಣ, ರೂಪ ಒಂದೇ. ವಾಯು, ಜಲ, ಅಗ್ನಿ ಅವನವೇ ಸ್ವರೂಪಗಳು; ಒಂದೇ ಭ್ರಮರವು ಮೂರುಲೋಕಗಳಲ್ಲಿ ಸುತ್ತುತ್ತಲಿರುವುದು. ಒಬ್ಬನನ್ನು ಅರಿಯುವದರಿಂದ ಸನ್ಮಾನ ಲಭಿಸುವುದು. ಜ್ಞಾನ ಮತ್ತು ಧ್ಯಾನದಲ್ಲಿ ಸಮರಸನಾದಂಥ ಗುರುಮುಖನು ಸಿಗುವುದು ಅಪರೂಪ. ಅವನ ಕೃಪೆ ಪಡೆದವನಿಗೇ ಸುಖಪ್ರಾಪ್ತಿ. ಗುರುವಿನ ದ್ವಾರದಲ್ಲಿ ಇದನ್ನು ಹೇಳಲಾಗುತ್ತದೆ.

(೯೩೦)

## ಅಕಾಲ ಪುರುಷ ಸತ್ಯ (ಸದಾ ರಹನೆವಾಲಾ) ಹೈ

(೪)

ਅਲਾਹੁ ಅಲಖು ಅಗಂಮು ಕಾದರು ಕರಣಹಾರು ಕರೀಮು ॥
ಸಭ ದುನೀ ಆವಣ ಜಾವಣೆ ಮੁಕಾಮು ಏಕು ರಹೀಮು ॥ ೬ ॥
ಮੁಕಾಮು ತಿಸನೊ ಆಖೀಐ ಜಿಸು ಸਿਸਿ ನ ಹೋವೀ ಲೇಖು ॥
ಅಸಮಾನು ಧರತೀ ಚਲਸੀ ಮੁಕಾಮು ಓಹೀ ಏಕು ॥ ॥ ೭ ॥
ದਿਨ ರਵਿ ಚಲੈ ನਿਸਿ ಸಸಿ ಚಲೈ ತಾರਿਕਾ ਲਖ ਪਲੋਇ ॥
ಮੁಕಾಮು ಓਹੀ ਏਕੁ ಹೈ ನಾನಕಾ ಸಚು ಬಗೋಇ ॥ ೮ ॥ ॥ ೧೭ ॥

ಸಿರಿ ರಾಗು, ಅಸಟಪದೀಆ

(೫)

ಸಚು ಪುರಾಣಾ ಹೋਵੈ ನಾਹੀ ಸೀತಾ ಕದೇ ನ ಪਾਟੈ
ನಾನಕ ಸಾਹਿਬੁ ಸಚੋ ಸಚਾ ತਿਚਰ ਜਾਪਿ ਜਾਪੈ ॥ ೧ ॥

ವಾರ ರಾಮಕಲೀ, ಸಲೋಕ ೧, ಪਉੜੀ ೯

(೬)

ಧಂನು ಸು ಕಾಗದು ಕಲಮು ಧಂನು ಧನು ಭಾಂಡಾ ಧನು ಮಂಸು ॥
ಧನು ಲೇಖਾਰੀ ನಾನಕಾ ಜਿਨਿ ನಾਮੁ ਲਿਖਾਇਆ ಸಚು ॥ ೧ ॥

ವಾರ ಮಲਾਰ, ಸಲೋಕ ೧, ಪਉੜੀ ೨೭

## ವಹ ಸಬಕಾ ಕರ್ತ (ರಚಯಿತಾ) ಹೈ ಔರ ಸ್ವಯಂ ಅಪನೀ ಕೃತಿ ಮೆ ವ್ಯಾಪ್ತ ಹೈ

(೭)

ತೂ ಕರತಾ ಪੁਰਖੁ ಅಗಂಮੁ ಹೈ ಆਪਿ ಸ੍ਰਿਸਟਿ ಉਪਾਤੀ ॥
ರಂಗ ಪਰੰਗ ಉਪਾਰਜਨਾ ਬਹੁ ਬਹੁ ਬਿਧਿ ಭಾਤੀ ॥
ತೂ ಜಾಣਹਿ ਜਿਨਿ ਉਪਾਈਐ ಸಭੁ ਖੇਲੁ ತੁಮಾತೀ ॥

ವಾರ ಮਾਝੁ ಪਉੜੀ ೧

(೮)

ತ್ರੈਤੀਆ ಬ੍ರਹ੍ਮ ಬਿਸਨੁ ಮਹੇਸਾ ॥ ದೇವಿ ದೇವ ಉਪਾਏ ವೇಸಾ ॥
ಜੋತೀ ಜಾತೀ ಗಣತ ನ ಆವೈ ॥ ಜಿನಿ ಸಾಜೀ ಸೊ ಕೀಮತਿ ಪਾਵੈ ॥
ಕೀਮਤਿ ਪਾਇ ರਹਿਆ ಭರಪੂਰਿ ॥ ಕਿਸੁ ನੇੜੈ ಕਿਸੁ ಆਖਾ ದੂਰಿ ॥ ೪ ॥

ಬਿਲਾਵਲੁ, ಥಿਤੀ ಪਉੜੀ ೪

## ಅಕಾಲ ಪುರುಷನು ಸತ್ಯ (ನಿತ್ಯ) ನು.

(೪)

ಅಲ್ಲಾನು ಅಗೋಚರನು, ಅಗಮನು, ಕಾದರನು, ಕರ್ತಾರನು, ಕರೀಮನು ದಯಾಳು. ಈ ಎಲ್ಲ ಜಗತ್ತು ಬರುವುದು, ಹೋಗುವುದು; ಕಾಯಂ ಇರುವವನು ಆ ದಯಾಳು ಮಾತ್ರ. ಹಣೆಯಲ್ಲಿ ಕರ್ಮರೇಖೆ ಯಿರದವನೇ ಕಾಯಂ ಇರುವವನೆಂದು ಹೇಳುವರು. ಆಕಾಶವೂ ಭೂಮಿಯೂ ಒಂದು ದಿನ ಹೋಗ ತಕ್ಕುವೇ; ಅಚಲನಾಗಿರುವವನು ಅವನೊಬ್ಬನೇ. ಹಗಲಲ್ಲಿ ರವಿ, ರಾತ್ರಿಯಲ್ಲಿ ಚಂದ್ರ ಚಲಿಸುತ್ತಲೇ ಇರುವರು; ಲಕ್ಷಾಂತರ ತಾರೆಗಳು ಚಲಿಸುವವು, ಲೋಪವಾಗುವವು. ಅವನೊಬ್ಬನೇ ಅಚಲನು ಎಂದು ನಾನಕನು ಸತ್ಯ ಹೇಳುತ್ತಾನೆ.

(೬೯)

(೫)

ಸತ್ಯವೆಂದಿಗೂ ಹಳೆಯದಾಗುವುದಿಲ್ಲ, ಸತ್ಯದೊಡನೆ ಹೊಲಿದುದೆಂದಿಗೂ ಹರಿಯುವುದಿಲ್ಲ. ಅವನೊಬ್ಬನೇ ಸರ್ವೋಪರಿ ಸತ್ಯ. ಅವನನ್ನು ಜಪಿಸುತ್ತಿರಿ, ಜಪಿಸುತ್ತಿರಿ ಎಲ್ಲಿಯ ವರೆಗೆ ಅವನ ಸಾಕ್ಷಾತ್ಕಾರವಾಗುವುದಿಲ್ಲವೊ ಅಲ್ಲಿಯ ವರೆಗೆ, ಎಂದು ನಾನಕನು ಹೇಳುತ್ತಾನೆ.

(೯೫೫ – ೯೫೬)

(೬)

ಧನ್ಯ ಕಾಗದ, ಧನ್ಯ ಆ ಲೆಕ್ಕಣಿಕೆ, ಧನ್ಯ ಆ ದೌತಿ, ಧನ್ಯ ಆ ಮಸಿ. ಅವನ ಸತ್ಯನಾಮವನ್ನು ಬರೆದ ಲೇಖಕನೂ ಧನ್ಯ ಧನ್ಯ ಎಂದು ನಾನಕ ಹೇಳುತ್ತಾನೆ.

(೧೨೯೧)

## ಅವನು ಸರ್ವರ ಕರ್ತಾರನು (ಸೃಜನಕನು) ಮತ್ತು ಸ್ವತಃ ತನ್ನ ಕೃತಿಯಲ್ಲಿ ವ್ಯಾಪ್ತನು

(೭)

ನೀನು ಕರ್ತಾರ ಪುರುಷನು ಅಗಮ್ಯನು; ನೀನೇ ಸ್ವತಃ ಈ ಸೃಷ್ಟಿಯನ್ನು ಸೃಜಿಸಿದವನು. ತರತರದ ಬಣ್ಣ ಬಣ್ಣದ ಬಹುರೂಪಿ ಸೃಷ್ಟಿಯನ್ನು ಮಾಡಿದವನೂ ನೀನೇ. ನೀನೇ ಇದನ್ನು ಬಲ್ಲವನು, ಇದೆಲ್ಲವೂ ನಿನ್ನದೇ ಲೀಲೆ.

(೧೩೮)

(೮)

ತೃತೀಯಾ ತಿಥಿ—ಬ್ರಹ್ಮ, ವಿಷ್ಣು, ಮಹೇಶ್ವರರನ್ನು, ಬಹುವೇಷ ಧಾರಿಗಳಾದ ದೇವಿ – ದೇವತೆಗಳನ್ನು ಹುಟ್ಟಿಸಿದವನೂ ನೀನೇ. ನಿನ್ನ ಜ್ಯೋತಿಯಿಂದ ಹುಟ್ಟಿದ ಜ್ಯೋತಿಗಳು ಅಗಣಿತ. ಹುಟ್ಟಿಸಿದವನೇ ಅವುಗಳ ಬೆಲೆಯನ್ನು ಕಟ್ಟಬಲ್ಲನು. ಸರ್ವವ್ಯಾಪಕನಾಗಿರುವವನೇ ಬೆಲೆಯನ್ನು ಕಟ್ಟಬಲ್ಲನು. ಅವನು ಯಾರ ಸನಿಹದಲಿದ್ದಾನೆಂದು, ಯಾರಿಂದ ದೂರವಿದ್ದಾನೆಂದು ಹೇಗೆ ಹೇಳಲಿ ?

(೮೩೯)

(೯)
ಕರಣಕಾರಣ ಸಮರಥು ಹೈ ಕಹು ನಾನಕ ಬಿಚಾರಿ ॥
ಕಾರಣು ಕರತೆ ವಸಿ ಹೈ ಜಿನಿ ಕಲ ರಖೀ ಧಾರಿ ॥ ೨ ॥

ಸಹಸಕೃತೀ ಸಲೋಕ ೫

## ವಹ ಸರ್ವವ್ಯಾಪಕ ಕಿಂತು ನಿರ್ಲಿಪ್ತ ಹೈ

(೧೦)
ಸಹಸ ತವ ನೈನ ನನ ನೈನ ಹಹಿ ತೋಹಿ ಕಉ ಸಹಸ ಮೂರತಿ ನನಾ ಏಕ ತೋಹೀ ॥
ಸಹಸ ಪದ ಬಿಮಲ ನನ ಏಕ ಪದ ಗಂಧ ಬಿನು ಸಹಸ ತವ ಗಂಧ ಇವ ಚಲತ ಮೋಹೀ ॥ ೨ ॥
ಸಭ ಮಹಿ ಜೋತಿ ಜೋತಿ ಹೈ ಸೋಇ ॥ ತಿಸ ಕೈ ಚಾನಣಿ ಸಭ ಮಹೀ ಚಾನಣು ಹೋಇ ॥ ೧ ॥
॥ ೭ ॥ ॥ ೯ ॥

ಧನಾಸರೀ

(೧೧)
ಬಲಿಹಾರೀ ಕುದರತಿ ವಸಿಆ ತೇರಾ ಅಂತು ನ ಜಾಈ ಲಖಿಆ ॥ ॥ ರಹಾಉ ॥
ಜಾತಿ ಮಹಿ ಜೋತಾ ಜೋತಿ ಮಹಿ ಜಾತಾ ಅಕಲ ಕಲಾ ಭರಪೂರಿ ರಹಿಆ ॥
ತೂ ಸಚಾ ಸಾಹಿಬು ಸಿಫತಿ ಸುಆಲ್ಹಿಉ ಜಿನಿ ಕೀತೀ ಸೋ ಪಾರಿ ಪಇಆ ॥

ವಾರ ಆಸಾ, ಸಲೋಕ ೧, ಪಉಡೀ ೧೨

## ವಹ ನಿರ್ಭಯ ಔರ ವೈರ – ರಹಿತ ಹೈ

(೧೨)
ಭೈ ವಿಚಿ ಪವಣು ವಹೈ ಸದ ವಾಉ ॥ ಭೈ ವಿಚಿ ಚಲಹಿ ಲಖ ದರೀಆಉ ॥
ಭೈ ವಿಚಿ ಅಗನಿ ಕಢೈ ವೇಗಾರಿ ॥ ಭೈ ವಿಚಿ ಧರತಿ ದಬೀ ಭಾರಿ ॥
ಭೈ ವಿಚಿ ಇಂದು ಫಿರೈ ಸಿರ ಭಾರಿ ॥ ಭೈ ವಿಚಿ ರಾಜಾ ಧರಮ ದುಆರು ॥
ಭೈ ವಿಚಿ ಸೂರಜು ಭೈ ವಿಚಿ ಚಂದು ॥ ಕೋಹ ಕರೋಡೀ ಚಲತ ನ ಅಂತು ॥
ಭೈ ವಿಚಿ ಸಿಧ ಬುಧ ಸುರನಾಥ ॥ ಭೈ ವಿಚಿ ಆಡಾಣೆ ಆಕಾಸ ॥
ಭೈ ವಿಚಿ ಜೋಧ ಮಹಾಬಲ ಸೂರ ॥ ಭೈ ವಿಚಿ ಆವಹಿ ಜಾವಹಿ ಪೂರ ॥
ಸಗಲಿಆ ಭಉ ಲಿಖಿಆ ಸಿರಿ ಲೇಖು ॥ ನಾನಕ ನಿರಭಉ ನಿರಂಕಾರೂ ಸಚು ಏಕು ॥
ನಾನಕ ನಿರಭಉ ನಿರಂಕಾರೂ ಹೋರಿ ಕೇತೆ ರಾಮು ರವಾಲ ॥
ಕೇತೀಆ ಕನ್ಹ ಕಹಾಣೀಆ ಕೇತೆ ವೇದ ಬೀಚಾರ

ವಾರ ಆಸಾ, ಸಲೋಕ ೧, ೨, ಪಉಡೀ ೪



 

(೯)

ನಾನಕನು ಸಂಪೂರ್ಣ ವಿಚಾರಮಾಡಿ ಹೇಳುವನೇನಂದರೆ – ಕರಣಕಾರಣನು ಅವನೇ, ಸಮರ್ಥನೂ ಅವನೇ. ಈ ಸೃಷ್ಟಿಯನ್ನು ಧಾರಣಮಾಡಿಟ್ಟುಕೊಂಡ ಕರ್ತಾರನ ವಶದಲ್ಲಿಯೇ ಯಾವತ್ತೂ ಕಾರಣಗಳು ಇರುವವು.

(೧೩೫೩)

## ಅವನು ಸರ್ವವ್ಯಾಪಕನು, ಆದರೆ ನಿರ್ಲಿಪ್ತನು

(೧೦)

ಸಹಸ್ರ ಕಣ್ಣುಗಳು ನಿನ್ನವು, ಆದರೆ ಒಂದು ಕಣ್ಣೂ ನಿನ್ನದಿಲ್ಲ; ಸಹಸ್ರ ಮೂರ್ತಿಗಳು ನಿನ್ನವು, ಒಂದೂ ಮೂರ್ತಿ ನಿನ್ನದಿಲ್ಲ; ಸಹಸ್ರನಿರ್ಮಲ ಚರಣಗಳು ನಿನ್ನವು, ಆದರೆ ಒಂದೂ ಚರಣವು ನಿನ್ನದಿಲ್ಲ; ಗಂಧಹೀನನು ನೀನು, ಆದರೆ ಸಹಸ್ರ ಗಂಧಗಳು ನಿನ್ನವು. ನಿನ್ನೀ ಲೀಲೆ ನನ್ನ ಮನ ಮೋಹಿಸಿತು; ಎಲ್ಲದರಲ್ಲಿಯೂ ಜ್ಯೋತಿ, ಅದೇ ನಿನ್ನ ಜ್ಯೋತಿ. ಅದರ ಬೆಳಕಿನಿಂದಲೇ ಜಗವು ಬೆಳಗುತ್ತಿದೆ.

(೧೩)

(೧೧)

ಸಕಲ ಪ್ರಕೃತಿಯಲ್ಲಿರುವವನೇ, ನಿನಗೆ ನಾನು ಸಮರ್ಪಿತನು. ನಿನ್ನ ಅಂತವು ಅಗೋಚರವಾದುದು. ಜಾತಿಯಲ್ಲಿ ಜ್ಯೋತಿ, ಜ್ಯೋತಿಯಲ್ಲಿ ಜಾತಿ. ಅಖಂಡ ಸೃಷ್ಟಿಯಲ್ಲಿ ನೀನು ಪರಿವ್ಯಾಪ್ತನು. ನೀನೇ ನಿಜವಾದ ಸ್ವಾಮಿ, ನಿನ್ನ ಸ್ತವನ ಸುಂದರ; ಸ್ತವನ ಮಾಡಿದವನು ಭವಸಾಗರದಿಂದ ಮುಕ್ತನು.

(೪೬೯)

## ಅವನು ನಿರ್ಭಯನು ಮತ್ತು ನಿರ್ವೈರನು

(೧೨)

ನಿನ್ನ ಭಯದಿಂದ ಪವನವು ಸದಾ ಬೀಸುತ್ತದೆ, ಭಯದಿಂದ ಲಕ್ಷಾಂತರ ನದಿಗಳು ಹರಿಯುತ್ತವೆ. ಭಯದಿಂದ ಅಗ್ನಿ ಬಿಟ್ಟಿ ಕೆಲಸಮಾಡುತ್ತದೆ. ಭಯದಿಂದಲೇ ಪೃಥ್ವಿ ಇಷ್ಟು ಭಾರಹೊತ್ತು ತಿರುಗುತ್ತಲಿದೆ; ಭಯದಿಂದ ಮೋಡಗಳು ತಲೆಯ ಮೇಲೆ ಭಾರಹೊತ್ತು ತಿರುಗುತ್ತಲಿವೆ. ಭಯದಿಂದ ಸೂರ್ಯನೂ ಭಯದಿಂದ ಚಂದ್ರನೂ ತಿರುಗುತ್ತಲಿದ್ದಾರೆ—ಕೋಟಿ ಹರದಾರಿ ಚಲಿಸುತ್ತಾರೆ, ದಾರಿಗೆ ಕೊನೆಯಿಲ್ಲ. ಭಯದಿಂದಲೇ ಸಿದ್ಧರು, ಬುದ್ಧರು, ಸುರರು, ನಾಥರು ಅನುಶಾಸಿತರು: ನಿನ್ನ ಭಯದಿಂದಲೇ ಆಕಾಶವು ಮೇಲೆ ಹಬ್ಬಿ ನಿಂತಿದೆ; ಶೂರರಾದ, ಮಹಾಬಲಶಾಲಿಗಳಾದ ಯೋಧರು ಭಯದಿಂದ ಕಾರ್ಯ ನಿರತರು. ಭಯದಿಂದ ದಳಗಳು ಬರುವವು, ಹೋಗುವವು; ಯಾವತ್ತೂ ಜನರ ಹಣೆಯ ಮೇಲೆ ಭಯದ ರೇಖೆ ಇರುವದು. ನಾನಕನು ಹೇಳುತ್ತಾನೆ: ಕೇವಲ ಒಬ್ಬ ನಿಜವಾದ ನಿರಂಕಾರನೇ ನಿರ್ಭಯನು. (ನಾನಕ) ನಿರ್ಭಯ ನಿರಂಕಾರನು; ಅವನದೆಷ್ಟು ರಾಮಚರಣ ಶಜವೊ ! ಅವನ ಕೃಷ್ಣರೆಷ್ಟೋ, ಎಷ್ಟು ಕೃಷ್ಣ ಕಥೆಗಳೊ; ಎಷ್ಟು ವೇದಗಳೊ; ಎಷ್ಟು ವಿಚಾರಗಳೋ !

(೪೬೪)

(੧੩)

ಜುಗಿ ಜುಗಿ ಥಾಪಿ ಸಹಾ ನಿರಬೈರು ॥
ಜನಮಿ ಮರಣಿ ನಹಿ ದಂಧಾ ಧೈರೂ ॥

**ರಾಮಕಲೀ ದಖಣೀ, ಓಅಂಕಾರ ಮಹಲು ੧੩.**

## ಉಸಕಾ ಅಸ್ತಿತ್ತ ಕಾಲ—ರಹಿತ ಹೈ

(੧੪)

ಜಗು ತಿಸ ಕೀ ಛಾಇಆ ಜಿಸು ಬಾಪು ನ ಮಾಇಆ ॥
ನಾ ತಿಸು ಭೈಣ ನ ಭರಾಉ ಕಮಾಇಆ ॥
ನಾ ತಿಸು ಓಪತಿ ಖಪತಿ ಕುಲ ಜಾತೀ ಓಹು ಅಜರಾವರು ಮನಿ ಭಾಇಆ ॥ ੭ ॥
ತೂ ਅಕಾಲ ಪುರಖು ನಾಹೀ ಸಿರಿ ಕಾಲಾ ॥
ತೂ ಪುರಖು ਅಗಂಮ ਅಲೇਖ ನಿರಾಲಾ ॥
ಸತ ಸಂತೋಖಿ ಸಬದಿ ಅತಿ ಸೀತಲು ಸಹಜ ಭಾಇ ಲಿವ ಲಾಇಆ ॥ ੭ ॥

**ಮಾರೂ ಸೋಲಹ.**

## ವಹ ಅಜನ್ಮಾ ಹೈ

(੧੫)

ಅಲಖ ಅಪಾರ ಅಗಂಮ ಅಗೋಚರ ನಾ ತಿಸು ಕಾಲು ನ ಕರಮಾ ॥
ಜಾತಿ ಅಜಾತಿ ಅಜೋನಿ ಸಂಭಉ ನಾ ತಿಸು ಭಾಉ ನ ಭರಮಾ ॥ ੧ ॥
ಸಾಚೆ ಸಚಿಆರ ವಿಟಹು ಕುರಬಾಣು ॥
ನಾ ತಿಸು ರೂಪ ವರನು ನಹಿ ರೇಖಿಆ ಸಾಚೆ ಸಬದಿ ನೀಸಾಣು ॥ ರಹಾಉ ॥
ನಾ ತಿಸು ಮಾತ ಪಿತಾ ಸುತ ಬಂಧಪ ನಾ ತಿಸು ಕಾಮು ನ ನಾರೀ ॥
ಅಕುಲ ನಿರಂಜನ ಅಪರ ಪರಂಪರು ಸಗಲೀ ಜೋತಿ ತುಮಾರೀ ॥ 2 ॥

**ಸೋರಠಿ.**

(੧੬)

ನ ತಿಸು ಬಾಪು ನ ಮಾಇ ಕಿನಿ ತೂ ಜਾਇಆ ॥
ನಾ ತಿಸು ರೂಪು ನ ರೇಖ ಬರನ ಸಬಾಇಆ ॥
ನಾ ತಿಸು ಭುಖ ಪಿಆಸ ರಜಾ ಧಾಇಆ ॥

**ವಾರ ಮಲಾರ ಮಹಲು ੭.**



 

(೧೩)

ಯಂಗಯುಗಗಳಿಂದ ಸೃಷ್ಟಿಕರ್ತಾರನು ಅವನು, ಸದಾ ನಿರ್ವೈರಿ. ಜನನ ಮರಣದಿಂದ ಮುಕ್ತನು ಅವನು, ಅವನಿಗೆ ಯಾವ ಉದ್ಯೋಗವೂ ಇಲ್ಲ.

(೯೩೧)

## ಅವನ ಅಸ್ತಿತ್ವವು ಕಾಲರಹಿತವಾದುದು

(೧೪)

ಈ ಜಗತ್ತು ಅವನ ನೆರಳು; ಅವನಿಗೆ ತಂದೆ ಇಲ್ಲ, ತಾಯಿ ಇಲ್ಲ; ಅವನಿಗೆ ಅಣ್ಣ–ಅಕ್ಕ, ತಂಗಿ–ತಮ್ಮ ಇಲ್ಲ; ಜನನ ಮರಣ ಇಲ್ಲ, ಕುಲ–ಜಾತಿ ಇಲ್ಲ; ಅವನು ಅಜರನು, ಅಮರನು. ಆ ಪರಮಾತ್ಮನಲ್ಲಿ ನನ್ನ ಮನವು ಲೀನವಾಗಿದೆ. ನೀನು ಅಕಾಲ ಪುರುಷನು, ನಿನ್ನ ತಲೆಯ ಮೇಲೆ ಕಾಲವಿಲ್ಲ; ನೀನು ಅಗೋಚರ, ಅಗಮ್ಯ, ಅದ್ವಿತೀಯ ಪುರುಷನು. ಸತ್ ಸಂತೋಷ ಶಬ್ದವು ಬಹು ತಂಪಾದುದು. ಶಬ್ದದ ಮುಖಾಂತರ ಸಹಜಭಾವದಿಂದ ನನ್ನ ಮನವು ನಿನ್ನಲ್ಲಿ ನೆಟ್ಟಿದೆ.

(೧೦೩೮)

## ಅವನು ಅಜನ್ಮನು

(೧೫)

ಅವನು ಅಜ್ಞೇಯನು, ಅಪಾರನು, ಅಗಮನು, ಅಗೋಚರನು, ಅವನು ಕಾಲರಹಿತನು, ಕರ್ಮರಹಿತನು. ಅವನು ಜಾತಿರಹಿತ, ಅಯೋನಿಜ, ಸ್ವಯಂಭೂ; ಅವನಿಗೆ ಭಾವವು ಇಲ್ಲ, ಭ್ರಮೆಯೂ ಇಲ್ಲ. ಆ ಚಿರಸತ್ಯನಿಗೆ ನಾನು ಸಮರ್ಪಿತನು. ಅವನಿಗೆ ಯಾವ ರೂಪವೂ ಇಲ್ಲ, ಬಣ್ಣವೂ ಇಲ್ಲ, ರೇಖೆಯೂ ಇಲ್ಲ. ಸತ್ಯ ಶಬ್ದದಿಂದ ಅವನ ಗುರುತು ಲಭಿಸುವುದು, ಅವನಿಗೆ ತಾಯಿಯಿಲ್ಲ; ತಂದೆಯಿಲ್ಲ, ಪುತ್ರನಿಲ್ಲ, ಸೋದರರಿಲ್ಲ, ಅವನು ಕಾಮರಹಿತನು, ಅವನಿಗೆ ಹೆಂಡತಿಯಿಲ್ಲ. ಓ ಕುಲರಹಿತ ನಿರಂಜನ ಅಪರಂಪರನೇ, ಈ ವಿಶ್ವವೆಲ್ಲವೂ ನಿನ್ನ ಜ್ಯೋತಿಯ ಪ್ರಕಾಶವೇ.

(೫೯೭)

(೧೬)

ಅವನಿಗೆ ತಂದೆಯಿಲ್ಲ, ತಾಯಿಯಿಲ್ಲ, ಅವನಿಗೆ ಜನ್ಮವಿತ್ತವರು ಯಾರು? ಅವನಿಗೆ ರೂಪವಿಲ್ಲ, ರೇಖೆಯೂ ಇಲ್ಲ, ಅದಾಗ್ಯೂ ಎಲ್ಲ ವರ್ಣ–ಬಣ್ಣಗಳೂ ಅವನವೇ. ಅವನಿಗೆ ಹಸಿವು ಇಲ್ಲ, ಬಾಯಾರಿಕೆಯೂ ಇಲ್ಲ, ಅವನು ಸದಾ ಸಂತೃಪ್ತನು.

(೧೨೮೯)



 

## ವಹ ಸ್ವಯಂಭೂ ಹೈ

(೧೭)

ಆಪೀನ್ಹೈ ಅಪು ಸಾಜಿಓ ಆಪೀನ್ಹೈ ರಚಿಓ ನಾಉ ॥
ದುಯೀ ಕ್ರುದರತಿ ಸಾಜೀಯೆ ಕರಿ ಆಸಣು ಡಿಠೋ ಚಾಉ ॥
ದಾತಾ ಕರತಾ ಆಪಿ ತೂ ತುಸಿ ದೇವಹಿ ಕರಹಿ ಪಸಾಉ ॥

ವಾರ ಆಸಾ, ಮಹಲಾ ೧.

## ವಹ ಚಿತ್ ಸ್ವರೂಪ ಹೈ

(೧೮)

ಪಪೈ ಪಾತಿಸಾಹು ಪರಮೇಸರು ವೇಖಣ ಕಉ ಪರಪಂಚು ಕೀಆ ॥
ದೇಖೈ ಬೂಝೈ ಸಭ ಕಿಛು ಜಾಣೈ ಅಂತರಿ ಬಾಹರಿ ರವಿ ರಹಿಆ ॥ ೨೪ ॥

ಆಸಾ ಪಟೀ.

## ಉಸಕೀ ಥಾಹ ಕೋಈ ನಹಿ ಲೇ ಸಕತಾ

(೧೯)

ತೂ ದರೀಆಉ ದಾನಾ ಬೀನಾ ಮೈ ಮಛುಲೀ ಕೈಸೆ ಅಂತು ಲಹಾ ॥
ಜಹ ಜಹ ದೇಖಾ ತಹ ತಹ ತೂ ಹೈ ತುಝ ತೇ ನಿಕಸೀ ಫೂಟಿ ಮರಾ ॥
ನ ಜಾಣಾ ಮೇಉ ನ ಜಾಣಾ ಜಾಲೀ ॥ ಜಾ ದುಖು ಲಾಗೈ ತಾ ತುಝೈ
ಸಮಾಲೀ ॥ ೧ ॥ ೩೧ ॥ ರಹಾಉ ॥

ಸಿರೀ ರಾಗು.

(೨೦)

ಸಾಲಾಹಿ ಸಾಲಾಹಿ ಏತೀ ಸುರತಿ ನ ಪಾಈಆ ॥
ನದಿಆ ಅತೈ ವಾಹ ಪವಹಿ ಸಮುಂದಿ ನ ಜಾಣೀಅಹಿ ॥
ಸಮುಂದ ಸಾಹ ಸುಲತಾನ ಗಿರಹಾ ಸೇತೀ ಮಾಲು ಧನು ॥
ಕೀಡೀ ತುಲಿ ನ ಹೋವನಿ ಜೇ ತಿಸು ಮನಹು ನ ವೀಸರಹಿ ॥ ೨೩ ॥

ಜಪು ಮಹಲಾ ೧ ೨೩.

 

## ಅವನು ಸ್ವಯಂಭೂ

(੧੭)

ಅವನು ತನ್ನನ್ನು ತಾನೇ ಹುಟ್ಟಿಸಿದವನು, ನಾಮುವನ್ನು ರಚಿಸಿದವನೂ, ಅವನೇ. ಪ್ರಕೃತಿಯನ್ನು ಹುಟ್ಟಿಸಿದವನೂ ಅವನೇ. ಪ್ರಕೃತಿ ಅವನ ಆಸನ; ಅದರ ಮೇಲೆ ಸಂತೋಷದಿಂದ ಕುಳಿತು ದೃಷ್ಟಿ ಬೀರಿದನು. ದಾತನೂ ಕರ್ತಾರನೂ ಸ್ವತಃ ನೀನೇ ಆಗಿರುವೆ. ನೀನು ತುಷ್ಟನಾಗಿ ಕೃಪೆಯನ್ನು ಸರ್ವರಿಗೂ ದಾನ ಮಾಡುವೆ.

(੪੬੩)

## ಅವನು ಚಿತ್‌ಸ್ವರೂಪನು

(੧੮)

ಅವನು ಪರಮ ಪಿತ ಪರಮೇಶ್ವರನು, ನೋಡುವ ಸಲುವಾಗಿ ಅವನು ಈ ಪ್ರಪಂಚವನ್ನು ರಚಿಸಿದನು. ಅವನು ನೋಡುವನು, ಅರಿಯುವನು, ಮತ್ತು ಎಲ್ಲವನ್ನೂ ತಿಳಿದವನು, ಅವನು ಎಲ್ಲರಲ್ಲಿ ಒಳಗೂ ಹೊರಗೂ ತುಂಬಿರುವವನು.

(੪੩੩)

## ಅವನ ಅಂತವನ್ನು (ಆಳವನ್ನು) ಯಾರೂ ಅರಿಯರು

(੧੯)

ನೀನು ನದಿ, ನೀನು ಎಲ್ಲ ಬಲ್ಲವನು, ನೋಡುವವನು. ನಾನು ಮೀನ, ನಿನ್ನ ಪಾರವನ್ನು (ಅಂತ ಆಳವನ್ನು) ಹೇಗೆ ಕಾಣಬಲ್ಲೆನು? ನಾನು ನೋಡಿದಲ್ಲೆಲ್ಲ ನೀನಿರುವೆ; ನಾನು ನಿನ್ನಿಂದ ಬೇರೆಯಾದಲ್ಲಿ ಒದ್ದಾಡಿ ಒದ್ದಾಡಿ ಸಾಯುವೆನು. ಯಾರು ಮೀನಗಾರರು, ಎಂಥ ಬಲೆ ಎಂಬುದು ನನಗೇನು ಗೊತ್ತು? ಸಂಕಟ ಬಂದಾಗ ನಿನ್ನನ್ನು ಸ್ಮರಿಸುವೆನು.

(੨੫)

(੨੦)

ಸ್ತುತಿಸುವವರು ನಿನ್ನನ್ನು ಸ್ತುತಿಸುವರು, ಆದರೆ ಅವರು ನಿನ್ನ ಪಾರವನ್ನು ಕಾಣುವರೇ? ನದಿಗಳೂ ನಾಲೆಗಳೂ ಸಾಗರ ಸೇರುವವು, ಆದರೆ ಅವು ಅದರ ಪಾರಾವಾರವನ್ನು ಹೇಗೆ ಕಾಣಬಲ್ಲವು? ಧನಿಕ ಗಿರಿಯಂತೆ ಅವನು ಸಾಗರಪತಿಯ ಪತಿ – ಸಾಮ್ರಾಟನು ಅವು ಕೀಟಗಳಿಗೆ ಸಮಾನ; ಯಾರನ್ನು ಪ್ರಭುವು ಮರೆಯಲಾರನೊ ಅವನಿಗೆ ಸರಿಸಮಾನವಾಗಿಯೂ ಅವು ಇರುವುದಿಲ್ಲ.

(੫)

# ಜಗತ್ ಉತ್ಪತ್ತಿ

ಹುಕಮೀ ಹೋವನಿ ಆಕಾರ, ಹುಕಮು ನ ಕಹಿಆ ಜಾಈ ।
ಹುಕಮಿ ಹೋವನಿ ಜೀಅ, ಹುಕಮಿ ಮಿಲೈ ವಡಿಆಈ ॥[1]

ಜಪು ಪਉಡೀ ೨

1. ಹುಕುಮಿನಿಂದೆಲ್ಲ ಆಕಾರ ಆಗುವುದು, ಹುಕುಮನು ವರ್ಣಿಸಲರಿದು ।
ಹುಕುಮಿನಿಂದ ಎಲ್ಲ ಜೀವ ಆಗುವುವು, ಹುಕುಮಿನಿಂದಲೇ ದೊರೆಯುವದು ಮಹಿಮೆ ॥

(೨೧)

ಅರಬದ ನರಬದ ಧುಂಧೂಕಾರಾ ॥ ಧರಣಿ ನ ಗಗನಾ ಹುಕಮು ಅಪಾರಾ ॥
ನಾ ದಿನು ರೈನಿ ನ ಚಂದು ನ ಸುರಜೂ ಸುನ ಸಮಾಧಿ ಲಗಾಇದಾ ॥ ೧ ॥
ಖಾಣೀನಾ ಬಾಣೀಪಉಣ ನ ಪಾಣೀ ॥ ಓಪತಿ ಖಪತಿ ನ ಆವಣ ಜಾಣೀ ॥
ಖಂಡ ಪತಾಲ ಸುಪತ ನಹೀ ಸಾಗರ ನದೀ ನ ನೀರು ವಹಾಇದಾ ॥ ೨ ॥
ನಾ ತದಿ ಸುಂಗರು ಮವು ಪಇಆಲಾ ॥ ದೋಜಕು ಭಿಸತು ನಹಿ ಖೈ ಕಾಲಾ ॥
ನರಕು ಸುರಗು ನಹೀಜಮಣು ಮರಣಾ ನಾ ಕೋ ಆಇ ನ ಜಾಇದಾ ॥ ೩ ॥
ಬ್ರಹಮಾ ಬಿಸನು ಮಹೇಸು ನ ಕೋಇ ॥ ಅವರು ನ ದೀಸೈ ಏಕೊ ಸೋಈ ॥
ನಾರಿ ಪುರಖು ನಹಿ ಜಾತಿ ನ ಜನಮಾ ನಾ ಕೊ ದುಖು ಸುಖು ಪಾಇದಾ ॥ ೪ ॥
ನಾ ತದಿ ಜತೀ ಸತೀ ಬನವಾಸೀ ॥ ನಾ ತದಿ ಸಿಧ ಸಾಧಿಕ ಸುಖವಾಸೀ ॥
ಜೋಗೀ ಜಂಗಮ ಭೇಖು ನ ಕೋಈ ನಾಕೋ ನಾಥು ಕಹಾಇದಾ ॥ ೫ ॥
ಜಪ ತಪ ಸಂಜಮ ನಾ ಬ್ರತ ಪೂಜಾ ॥ ನಾ ಕೋ ಆಖಿ ವಖಾಣೈ ದೂಜಾ ॥
ಆಪೈ ಆಪಿ ಉಪಾಇ ವಿಗಸೈ ಅಪೈ ಕೀಮತಿ ಪಾಇದಾ ॥ ೬ ॥
ನಾ ಸುಚಿ ಸಂಜಮು ತುಲಸೀ ಮಾಲಾ ॥ ಗೋಪೀ ಕಾನು ನ ಗಊ ಗೋಆಲಾ ॥
ತಂತು ಮಂತು ಪಾಖಂಡು ನ ಕೋಈ ನಾ ಕೋ ವಂಸು ವಜಾಇದಾ ॥ ೭ ॥
ಕರಮ ಧರಮ ನಹೀಮಾಇಆ ಮಖೀ ॥ ಜಾತಿ ಜನಮು ನಹೀದೀಸೈ ಆಖೀ ॥
ಮಮತಾ ಜಾಲು ಕಾಲು ನಹೀ ಮಾಥೈ ನಾ ಕೋ ಕಿಸೈ ಧಿಆಇದಾ ॥ ೮ ॥

... ... ... ... ...

ನಾ ಕೋ ಮುಲಾ ನಾ ಕೋ ಕಾಜೀ ॥ ನಾ ಕೋ ಸೇಖು ಮಸಾಇಕು ಹಾಜೀ ॥
ರಈ ಅತಿ ರಾಉ ನ ಹಉಮೈ ದುನಿಆ ಕೋ ಕಹಣು ಕಹಾಇದಾ ॥ ೧೧ ॥

... ... ... ... ...

ಬೇದ ಕತೇಬ ನ ಸಿಮ್ರಿತಿ ಸಾಸತ ॥ ಪಾಠ ಪುರಾಣ ಉದೈ ನಹೀ ಆಸತ ॥
ಕಹತಾ ಬಕತಾ ಆಪಿ ಅಗೋಚರು ಆಪೈ ಅಲಖು ಲಖಾಇದಾ ॥ ೧೩ ॥

ಜಾ ತಿಸು ಭಾಣಾ ತಾ ಜಗತು ಉಪಾಇಆ ॥ ಬಾಝು ಕಲಾ ಆಡಾಣು ರಹಾಇಆ ॥
ಬ್ರಹಮಾ ಬಿಸನು ಮಹೇಸು ಉಪಾಏ ಮಾಇಆ ಮೋಹು ವಧಾಇದಾ ॥ ೧೪ ॥

ವಿರಲೇ ಕಉ ಗುರಿ ಸಬದು ಸುಣಾಇಆ ॥ ಕರಿ ಕರಿ ದೇಖೈ ಹುಕಮು ಸಬಾಇಆ ॥
ಖಂಡ ಬ್ರಹಮಂಡ ಪಾತಾಲ ಆರಂಭೆ ಗುಪತಹು ಪರಗಟೀ ಆಇದಾ ॥ ೧೫ ॥

ತಾ ಕಾ ಅಂತು ನ ಜಾಣೈ ಕೋಈ ॥ ಪೂರೆ ಗುರ ತೇಸೋಝೀಹೋಈ ॥
ನಾನಕ ಸಾಚಿ ರತೆ ಬಿಸಮಾದಿ ಬಿಸಮ ಭಏ ಗುಣ ಗಾಇದಾ ॥ ೧೬ ॥

ಮಾರೂ ಸೋಲಹೆ.

(೨೧)
ಹತ್ತು ಹತ್ತು ಕೋಟಿ ಯುಗಗಳ ವರೆಗೆ ಹಬ್ಬಿತ್ತು ಕಗ್ಗತ್ತಲು; ಆಗಿರಲಿಲ್ಲ ಧರಿಣಿ, ಗಗನ, ಹಬ್ಬಿತ್ತು ಕೇವಲ ಅಪಾರ ಹುಕುಮು. ಹಗಲು ರಾತ್ರಿಯಿರಲಿಲ್ಲ, ಸೂರ್ಯ ಚಂದ್ರರಿರಲಿಲ್ಲ. ಆಗವನು ಶೂನ್ಯ ಸಮಾಧಿಯನ್ನು ಹಚ್ಚಿ ಕುಳಿತಿದ್ದನು. ಗಣಿಯಿರಲಿಲ್ಲ, ವಾಣಿಯಿರಲಿಲ್ಲ; ಜಲವಿರಲಿಲ್ಲ, ಪವನವಿರಲಿಲ್ಲ ಇನಿತೂ, ಜನನ ಮರಣ, ಆವಾಗಮನವಿರಲಿಲ್ಲ ಆಗ; ನವಖಂಡಗಳೂ ಸಪ್ತ ಸಾಗರಗಳೂ, ಪಾತಾಳಗಳೂ ಇರಲಿಲ್ಲವಾಗ; ನದಿಗಳಲ್ಲಿ ನೀರು ಹರಿಯುತ್ತಿರಲಿಲ್ಲ. ಆಗ ನರಕ, ಸ್ವರ್ಗ, ತ್ರಿಲೋಕಗಳಿರಲಿಲ್ಲ, ದೋಜಖ (ನರಕ) - ಬಹಿಶ್ತ (ಸ್ವರ್ಗ) ಹಾಗೂ ಕಯಕಾಲಗಳಿರಲಿಲ್ಲ, ನರಕ, ಸ್ವರ್ಗ, ಜನ್ಮ – ಮರಣಗಳಿರಲಿಲ್ಲ; ಯಾರೂ ಜನಿಸುತ್ತಿರಲಿಲ್ಲ, ಸಾಯುತ್ತಿರಲಿಲ್ಲ. ಬ್ರಹ್ಮ, ವಿಷ್ಣು, ಮಹೇಶರಾರೂ ಇರಲಿಲ್ಲ, ಕೇವಲ ಅವನೊಬ್ಬನೇ ಇದ್ದನು, ಬೇರಾವನೂ ಇರಲಿಲ್ಲ. ನಾರಿಯಿರಲಿಲ್ಲ, ಪುರುಷನಿರಲಿಲ್ಲ; ಜನ್ಮವಿರಲಿಲ್ಲ, ಜಾತಿಯಿರಲಿಲ್ಲ; ಸುಖ ದುಃಖ ಇದ್ದವರೂ ಇರಲಿಲ್ಲ ಆಗ. ಯತಿ, ಸತಿ, ವನವಾಸಿಗಳಾರೂ ಇರಲಿಲ್ಲ ಆಗ. ಸಿದ್ಧರೂ ಸಾಧಕರೂ, ಸುಖವಾಸಿಗಳು ಸಹ ಇರಲಿಲ್ಲವಾಗ. ಜೋಗಿ, ಜಂಗಮರು, ಹಾಗೂ ವೇಷಧಾರಿಗಳು ಇರಲಿಲ್ಲ; ಆಗ ತಾನು ನಾಥನು ಒಡೆಯನೆಂದು ಹೇಳಿಕೊಳ್ಳುವವರು ಯಾರು ? ಜಪ, ತಪ ಸಂಯಮಗಳು ಇರಲಿಲ್ಲ; ವ್ರತಗಳಿರಲಿಲ್ಲ; ಪೂಜೆಯಿರಲಿಲ್ಲ; ಆಗ ಅವನ ಹೊರತು ಅನ್ಯರ ವರ್ಣನೆ ಮಾಡುವವರು ಯಾರು ? ಅವನು ತನ್ನಿಂದ ತಾನೇ ಹುಟ್ಟಿದವನು, ಮತ್ತು ಬೆಳೆದವನು, ತನ್ನ ಬೆಲೆಯನ್ನು ಕಟ್ಟುವವನೂ ಅವನೇ ಆಗಿದ್ದನು. ಶುಚಿ, ಸಂಯಮ, ತುಳಸೀಮಾಲೆ ಮುಂತಾದುವು ಇರಲಿಲ್ಲ; ಗೋಪಿಕೆಯರು, ಕೃಷ್ಣನು ಮತ್ತು ಗೋವುಗಳು, ಗೋಪಾಲಕರು ಇರಲಿಲ್ಲ; ತಂತ್ರ, ಮಂತ್ರ, ಡಬಡ್ಡಾಳಿಕೆ ಯಾವುದೂ ಇರಲಿಲ್ಲ ಆಗ. ಇದ್ದಿಲ್ಲ ಆಗ ಯಾರೂ ಕೊಳಲೂದುವವರು. ಕರ್ಮ – ಧರ್ಮ ಮತ್ತು ಮಾಯೆ ಮೋಹ ಇರಲಿಲ್ಲವಾಗ. ಜನ್ಮದಿಂದ ಜಾತಿಯೆಂಬುದು ಕಾಣಿಸುತ್ತಿರಲಿಲ್ಲ. ಮಮತೆಯ ಜಾಲವಿರಲಿಲ್ಲ; ಹಣೆಯ ಮೇಲೆ ಕಾಲ ರೇಖೆ ಲಿಖಿತವಿರಲಿಲ್ಲ, ಧ್ಯಾನ ಮಾಡುವವನೂ ಇರಲಿಲ್ಲ ಆಗ.

... ... ... ... ...

ಮುಲ್ಲಾ, ಕಾಜೀ, ಶೇಖ, ಮಶಾಇಖ ಹಾಜಿಗಳೂ ಇರಲಿಲ್ಲ; ರಾಜರೂ ಇರಲಿಲ್ಲ, ಪ್ರಜೆಗಳೂ ಇರಲಿಲ್ಲ; ಯಾವ ಅಹಮ್ಮಿನ ಪ್ರಪಂಚವೂ ಇರಲಿಲ್ಲ. ಅನ್ನುವವನು ಅನ್ನಿಸಿಕೊಳ್ಳುವವನೂ ಯಾವನು ಇರಲಿಲ್ಲ. ॥ ೧೧ ॥

... ... ... ... ...

ಆಗ ವೇದ, ಕುರಾನ್, ಸ್ಮೃತಿಗಳು, ಶಾಸ್ತ್ರಗಳು ಇರಲಿಲ್ಲ; ಆಗ ಪಾಠ, ಪುರಾಣ, ಉದಯಾಸ್ತಗಳು ಇರಲಿಲ್ಲ. ಅವನು ಸ್ವತಃ ಅಗೋಚರ ವಚನನೂ ವಕ್ತಾರನೂ ಆಗಿದ್ದನು. ತನ್ನನ್ನು ತಾನೇ ನೋಡುವ ಅಗೋಚರನು ಅವನು. (೧೩)

ತನಗೆ ಇಷ್ಟ ಬಂದಾಗ ಜಗತ್ತನ್ನು ರಚಿಸಿದನು, ನಿರಾಧಾರ ಆಕಾಶವನ್ನು ನಿಲ್ಲಿಸಿದನು. ಆಮೇಲೆ ಬ್ರಹ್ಮ, ವಿಷ್ಣು, ಮಹೇಶರನ್ನು ಹುಟ್ಟಿಸಿದನವನು, ಮಾಯೆಯ ಮೋಹವನ್ನು ಹಬ್ಬಿಸಿದನು. ॥ ೧೪ ॥

ಅಪರೂಪವಾಗಿ ಕೆಲವರಿಗೆ ಗುರು ಶಬ್ದೋಪದೇಶ ಮಾಡಿದನು. ಅವನ ಹುಕುಮಿನಿಂದಲೇ ಉತ್ಪತ್ತಿ ರಚನೆ, ಪಾಲನೆ – ಪೋಷಣೆ. ಹುಕುಮಿನಿಂದಲೇ ಬ್ರಹ್ಮಾಂಡ, ಖಂಡ, ಪಾತಾಳಗಳು ಆರಂಭವಾದವು. ಗುಪ್ತವಿದ್ದುದನ್ನು ಪ್ರಕಟಗೊಳಿಸಿದನು. ॥ ೧೫ ॥

ಅವನ ಅಂತವು ಯಾರಿಗೂ ತಿಳಿಯದು. ಗುರುವಿನಿಂದಲೇ ಪೂರ್ಣ ಅರಿವುಂಟಾಗುವದು. (ನಾನಕನು ಹೇಳುತ್ತಾನೆ) ಸತ್ಯಾನುರಕ್ತನು ವಿಸ್ಮಯ–ಉನ್ಮಾದದ ಸ್ಥಿತಿಯಲ್ಲಿ ಅವನದೇ ಗುಣಗಾನವನ್ನು ಮಾಡುವನು. ॥ ೧೬ ॥
(೧೦೩೫ – ೩೬)

 

## ರಚನಾ ಅನಂತ

(೨೨)

ಪಾತಾಲಾ ಪಾತಾಲ ಲಖ ಆಗಾಸಾ ಆಗಾಸ ॥
ಓಡಕ ಓಡಕ ಭಾಲಿ ಥಕೆ ವೇದ ಕಹನಿ ಇಕ ವಾತ ॥
ಸಹಸ ಅಠಾರಹ ಕಹನಿ ಕತೇಬಾ ಅಸುಲೂ ಇಕು ಧಾತು ॥
ಲೇಖಾ ಹೋಇ ತ ಲಿಖೀಐ ಲೇಖೈ ಹೋಇ ವಿಣಾಸು ॥
ನಾನಕ ವಡಾ ಆಖೀಐ ಆಪೆ ಜಾಣೈ ಆಪು ॥ ೨೨ ॥

ಜಪು, ಪಉಡೀ ೨೨

(೨೩)

ಕೇತೆ ಪವಣ ಪಾಣಿ ಬೈಸಂತರ ಕೇತೆ ಕಾನ ಮಹೇಸ ॥
ಕೇತೆ ಬರಮೆ ಘಾಡತಿ ಘಡೀಅಹಿ ರೂಪ ರಂಗಕೆ ವೇಸ
ಕೇತೀ ಆ ಕರಮ ಭೂಮೀ ಮೇರ ಕೇತೆ ಕೇತೆ ಧೂ ಉಪದೇಸ ॥
ಕೇತೆ ಇಂದ ಚಂದ ಸೂರ ಕೇತೆ ಕೇತೆ ಮಂಡಲ ದೇಸ ॥
ಕೇತೆ ಸಿಧ ಬುಧ ನಾಥ ಕೇತೆ ಕೇತೆ ದೇವೀ ವೇಸ ॥
ಕೇತೆ ದೇವ ದಾನವ ಮುನಿ ಕೇತೆ ಕೇತೆ ರತನ ಸಮುಂದ ॥
ಕೇತೀಆ ಖಾಣಿ ಕೇತೀಆ ಬಾಣ ಕೇತೆ ಪಾತ ನರಿಂದ ॥
ಕೇತೀಆ ಸುರತೀ ಸೇವಕ ಕೇತೆ ನಾನಕ ಅಂತು ನ ಅಂತು ॥ ೩೫ ॥

ಜಪು, ಪಉಡಿ ೩೫

## ರಚನಾ — ಕಾಲ

(೨೪)

ಕವಣು ಸುವೇಲಾ ವಖತು ಕವಣು ಕವಣ ಥಿತಿ ಕವಣು ವಾರು ॥
ಕವಣ ಸಿ ರುತೀ ಮಾಹು ಕವಣು ಜಿತು ಹೋಆ ಆಕಾರು ॥
ವೇಲ ನ ಪಾಈಆ ಪಂಡತೀ ಜಿನ ಹೋವೈ ಲೇಖು ಪುರಾಣು ॥
ವಖತು ನ ಪಾಇಓ ಕಾದೀಆ ಜಿ ಲಿಖನಿ ಲೇಖು ಕುರಾಣು ॥
ಥಿತಿ ವಾರು ನಾ ಜೋಗಿ ಜಾಣೈ ರುತಿ ಮಾಹು ನಾ ಕೋಈ ॥
ಜಾ ಕರತಾ ಸಿರಠೀ ಕਉ ಸಾಜೆ ಆಪೆ ಜಾಣೈ ಸೋಈ ॥
ಕಿವ ಕರಿ ಆಖಾ ಕಿವ ಸಾಲಾಹಿ ಕਿਉ ವರನೀ ಕಿವ ಜಾಣಾ ॥
ನಾನಕ ಆಖಣಿ ಸಭುಕೋ ಆಖೈ ಇಕದೂ ಇಕು ಸಿਆಣಾ ॥

ಜಪು, ಪಉಡಿ ॥ ೨೧ ॥

## ರಚನಾ ಮಿಥ್ಯಾ ನಹಿ, ಸತ್ಯ ಹೈ

(೨೫)

ಸಚೆ ತೇರೆ ಖಂಡ ಸಚೆ ಬ್ರಹಮಂಡ ॥ ಸಚೆ ತೇರೆ ಲೋਅ ಸಚೆ ಆಕಾರ ॥
ಸಚೆ ತೇರೆ ಕರಣೆ ಸರಬ ಬೀಚಾರ ॥ ಸಚಾ ತೇರಾ ಅಮರು ಸಚಾ ದೀಬಾಣು ॥

## ರಚನೆ ಅನಂತ

(೨೨)

ಪಾತಾಳಗಳ ಕೆಳಗೆ ಲಕ್ಷಾಂತರ ಪಾತಾಳಗಳು, ಆಕಾಶಗಳ ಮೇಲೆ ಆಕಾಶಗಳು. ವೇದಗಳು ಇಷ್ಟು ಹೇಳುವವು, ನಾವು ಸೀಮೆ (ಮೇರೆ)ಯನ್ನು ಹುಡುಕುತ್ತ ಹುಡುಕುತ್ತ ದಣಿದೆವು. ಹದಿನೆಂಟು ಗ್ರಂಥಗಳು ಸಹಸ್ರಾರು ವಿಶ್ವಗಳ ಮಾತು ಹೇಳುವವು. ಸೃಷ್ಟಿಗೆ ಪಾರವಾರವು – ಮೇರೆಯೂ – ಇದ್ದರೆ ಲೆಕ್ಕ ಬರೆಯಬಹುದು. ಆದರೆ ಲೆಕ್ಕವಿಡುವಲ್ಲಿಯೇ ಜೀವನವು ಕಳೆದು ಹೋಗಿಬಿಡುವುದು. ಅದು ಸುದೀರ್ಘವಾದುದು, ಎಷ್ಟು ದೊಡ್ಡದು ಎಂಬುದು ಸ್ವತಃ ಅವನಿಗೇ ಗೊತ್ತು ಎಂದು ನಾನಕನು ಹೇಳುತ್ತಾನೆ.

(೫)

(೨೩)

ಎಷ್ಟೋ ವಾಯುದೇವರು, ಜಲದೇವರು, ಅಗ್ನಿದೇವರು, ಎಷ್ಟೋ ಕೃಷ್ಣರು, ಮಹೇಶರು. ಅದೆಷ್ಟೋ ಬ್ರಹ್ಮರು ಸೃಷ್ಟಿ ರಚಿಸುವರು. ಅದರ ರೂಪ ಅಗಣಿತ, ಅದರ ವರ್ಣ ಅಗಣಿತ. ಅಗಣಿತ ಕರ್ಮಭೂಮಿಗಳು, ಅಗಣಿತ ಧ್ರುವ ನಾರದರು. ಅಗಣಿತ ಇಂದ್ರರು, ಸೂರ್ಯರು, ಚಂದ್ರರು ಮತ್ತು ಭೂಮಂಡಲಗಳು. ಅಗಣಿತ ಸಿದ್ಧರು, ಬುದ್ಧರು, ಮತ್ತು ನಾಥರು; ದೇವಿಯರೂ ಅಗಣಿತ. ದೇವದಾನವರು ಅಗಣಿತ, ಮುನಿಗಳು ಅಗಣಿತ, ಅಗಣಿತ ಸಮುದ್ರಗಳು. ಅಗಣಿತ ಜೀವ ಜಾತಿಗಳು, ವಾಣಿಗಳೂ ಅಗಣಿತ, ಅಗಣಿತ ಅರಸರು, ಚಕ್ರವರ್ತಿಗಳು ಅಗಣಿತ. ಶ್ರುತಿಗಳು, ಅವುಗಳ ಸೇವಕರೂ ಅಗಣಿತ; ಅವುಗಳ ಬಗೆಗೆ ಹೇಳುವುದಕ್ಕೆ ಇತಿಮಿತಿಯಿಲ್ಲ ಎಂದು ನಾನಕನು ಹೇಳುತ್ತಾನೆ.

(೭)

## ರಚನೆಯ ಕಾಲ

(೨೪)

ಆಕಾರ ಸೃಷ್ಟಿಯಾದಾಗ ಯಾವ ಸಮಯ, ಕಾಲ, ತಿಥಿ, ದಿವಸ? ಯಾವ ಋತು, ಮಾಸ ಇತ್ತು? ಪಂಡಿತರಿಗೂ ತಿಳಿಯದೆ ಹೋಯಿತು. ಇಲ್ಲದಿದ್ದರೆ ಪುರಾಣಗಳಲ್ಲಿ ಬರೆದಿಡುತ್ತಿದ್ದರು. ವೇಳೆಯು ಕಾಜಿಗಳಿಗೂ ಗೊತ್ತಾಗಲಿಲ್ಲ ಇಲ್ಲದಿದ್ದರೆ ಕುರಾಣದಲ್ಲಿ ಬರೆದಿಡುತ್ತಿದ್ದರು. ಯೋಗಿಗಳಿಗೂ ತಿಥಿ ದಿವಸ ತಿಳಿಯಲಿಲ್ಲ. ಯಾರಿಗೂ ಋತು, ಮಾಸ ಸಹ ಗೊತ್ತಾಗಲಿಲ್ಲ. ಯಾವ ಕರ್ತಾರನು ಈ ಸೃಷ್ಟಿಯನ್ನು ರಚಿಸಿದನೋ ಅವನಿಗೇ ಗೊತ್ತು. ನಾನು ಹೇಗೆ ಶ್ಲಾಘಿಸಲಿ ? ಸ್ವಲ್ಪಾದರೂ ಹೇಗೆ ಹೇಳಲಿ? ಹೇಗೆ ವರ್ಣಿಸಲಿ? ನಾನು ಹೇಗೆ ಅರಿಯಬಲ್ಲೆ? ಒಬ್ಬರಿಗಿಂತ ಒಬ್ಬರು ಬುದ್ಧಿವಂತರೆಂದು ಹೇಳುವವರೇನೋ ಹೇಳುವರು.

(೪)

## ರಚನೆ ಮಿಥ್ಯೆಯಲ್ಲ, ಸತ್ಯ

(೨೫)

ಖಂಡಗಳೂ ಸತ್ಯ, ಬ್ರಹ್ಮಾಂಡಗಳೂ ಸತ್ಯ. ಲೋಕವೂ ಸತ್ಯ, ಆಕಾರವೂ ಸತ್ಯ. ಸತ್ಯ ನಿನ್ನ ಕಾರ್ಯಗಳು, ಸರ್ವ ವಿಚಾರಗಳು; ಸತ್ಯ ನಿನ್ನ ಶಾಸನವು, ಸತ್ಯ ನಿನ್ನ ದರಬಾರು; ನಿನ್ನ ಹುಕುಂ ಸತ್ಯ, ಫರಮಾನು ಸತ್ಯ,

ಸಚಾ ತೇರಾ ಹುಕಮು ಸಚಾ ಫುರಮಾಣು ॥ ಸಚಾ ತೇರಾ ಕರಮು ಸಚಾ ਨੀਸਾਣੁ ॥
ಸಚಿ ತುಧು ಆಖಿಹಿ ಲಖ ಕರೋಡಿ ॥ ಸಚೈ ಸಭಿ ತಾಣಿ ಸಚೈ ಸಭಿ ಜೋರಿ ॥
ಸಚೀ ತೇರೀ ಸಿಫತಿ ಸಚೀ ಸಾಲಾಹ ॥ ಸಚೀ ತೇರೀ ಕುದರತಿ ಸಚೆ ಪಾತಿಸಾಹ ॥
ನಾನಕ ಸಚು ಧಿಆਇਨਿ ಸಚು ॥ ಜೋ ਮਰਿ ಜಮ್ಮೈ ಸು ಕಚು ਨਿਕਚੁ ॥ ੧ ॥ ਮਃ ੧ ॥

ವಾರ ಆಸಾ ಪಉಡೀ ೨ ಸಲೋಕ ೧.

## ರಚನಾ ಕೈಸೆ ?

(੨੬)

ಕಿತು ಕಿತು ಬಿಧಿ ಜಗು ಉಪಜೈ ಪುರಖಾ ಕಿತು ಕಿತು ದುಃಖಿ ಬಿನಸಿ ಜಾਈ ॥
ಹಉਮੈ ವಿಚಿ ಜಗು ಉಪಜೈ ಪುರಖಾ ನಾਮਿ ਵਿਸਰਿਐ ದುಖು ಪಾਈ ॥
ಗುರಮੁਖਿ ಹೋವೈ ಸು ਗਿਆਨੁ ತತು ಬೀಚಾರೈ ಹಉਮੈ ಸಬದਿ ಜಲਾਏ ॥
ತನು ਮਨੁ ਨਿਰਮਲੁ ਨਿਰਮਲ ವಾಣೀ ಸಾಚೈ ರಹೈ ಸಮਾਏ ॥
ನಾਮੇ ನಾਮਿ ರಹೈ ಬೈರਾਗੀ ಸಾಚು ರಖਿਆ ಉਰਿ ಧಾರੇ ॥
ನಾನಕ ಬಿನು ನಾವೈ ಜೋਗು ಕਦੇ ನ ಹೋವೈ ದೇಖಹು ರಿದੈ ಬೀಚಾರੇ ॥ ੬੮ ॥

ರಾಮಕಲೀ ಸಿಧ ಗೋಸಟਿ, ಪಉಡೀ ೬೮.

## ರಚನಾ ಕ್ಯೊಂ ?

(੨੭)

ಆಪੇ ಛਿੰਝੁ ಪਵਾਇ ਮਲਾਖਾਡਾ ರಚਿਆ ॥
ಲਥੇ ಭਡਥੂ ਗਾਇ ಗುರਮੁਖਿ ਮਚਿਆ ॥
ਮਨਮੁਖ ਮਾਰੇ ਪਛਾਡਿ ਮੂਰਖ ਕਚਿਆ ॥
ಆਪਿ ಭਿੜੈ ਮਾਰੇ ಆਪਿ ಆਪਿ ಕਾਰಜು ರಚಿಆ ॥

ವಾರ ಮಲಾರ, ಪಉಡೀ ೪.

(੨੮)

ಗುರಮುಖಿ ಧರਤੀ ಸಾಚੈ ಸಾਜੀ ॥ ತಿಸ ਮਹਿ ಓಪਤਿ ಖਪਤਿ ಸು ಬಾಜੀ ॥
ಗುರ ಕੈ ಸಬದਿ ರಪੈ ರಂਗੁ ಲਾਇ ॥ ಸಾਚਿ ರತਉ ಪਤਿ ಸਿਉ ಘਰਿ ಜਾਇ ॥
ಸಾಚ ಸಬದ ಬਿਨੁ ಪਤਿ ನਹੀ ಪਾਵੈ ॥ ನಾನಕ ಬಿನು ನಾਵੈ ಕਿਉ ಸಾಚਿ ಸਮਾਵੈ ॥ ੨੦ ॥

ರಾಮಕಲೀ ಸಿಧ ಗೋಸಟਿ, ಪಉಡೀ ॥ ೨೦ ॥

(੨੯)

ಸಂತ ಹੇತಿ ಪ੍ਰਭਿ ತ੍ਰਿਭੁਵਣ ಧಾರੇ ॥ ಆਤਮੁ ಚೀನੈ ಸು ತತು ಬೀಚಾರੇ ॥ ੮ ॥
ಸಾಚು ರಿದੈ ಸಚು ಪ੍ਰੇਮ ನਿਵਾਸ ॥ ಪ੍ਰಣವਤਿ ನಾನಕ ಹਮ ತಾ ಕੇ ದಾಸ ॥ ੯ ॥ ੮ ॥

ಸಲುಡೀ ಅಸಟಪದಿಆ ॥

ನಿನ್ನ ಮುಂದ್ರಾಂಕನವೂ ಸತ್ಯವಾದುದು. ಲಕ್ಷಾಂತರ, ಕೋಟ್ಯಂತರ ಜನರು ನೀನು ಸತ್ಯನೆಂದು ಹೇಳುವರು. ಸತ್ಯದಲ್ಲಿಯೇ ಪವನ, ಪ್ರಾಣ, ಸರ್ವಶಕ್ತಿ; ನಿನ್ನ ಗುಣಗಾನವೂ ಸತ್ಯ, ಸ್ತುತಿಯೂ ಸತ್ಯ; ಸತ್ಯ ಸಮ್ರಾಟನೆ, ಸತ್ಯ ನಿನ್ನ ಶಕ್ತಿ. ಸತ್ಯದಲ್ಲಿ ಲೀನರಾದವರೋ ಸತ್ಯರು; ಜನನ – ಮರಣದಲ್ಲಿ ಅಲೆಯುವವರು ಅಸತ್ಯರು ಎಂದು ನಾನಕನು ಹೇಳುವನು.

(೪೬೩)

## ಸೃಷ್ಟಿ (ರಚನೆ) ಹೇಗೆ ?

(೨೬)

ಓ ಪುರುಷನೆ, ಈ ಜಗದ ಸೃಷ್ಟಿ ಎಂತಾಗುವುದು ? ಯಾವ ದುಃಖಗಳಿಂದ ಇದರ ವಿನಾಶ ವಾಗುವುದು ? 'ಓ ಪುರುಷನೆ, ಅಹಮ್ಮಿನ ನಡುವೆ ಈ ಜಗದ ಉತ್ಪತ್ತಿ ಆಗುತ್ತದೆ; ನಾಮದ ವಿಸ್ಮರಣೆಯಿಂದ ದುಃಖವುಂಟಾಗುವದು. ಗುರುಮುಖನಿರುವವನೇ ನಾಮತತ್ವವನ್ನು ಗುರುತಿಸುವನು, ಶಬ್ದದಿಂದ ಅಹಮ್ ಸುಡುತ್ತದೆ. ಸತ್ಯದಲ್ಲಿ ಲೀನವಾಗಿರುವವನ ತನು – ಮನ ನಿರ್ಮಲವಾಗಿರುವವು, ಅವನ ವಾಣಿಯೂ ನಿರ್ಮಲವಾಗಿರುವುದು. ನಾಮಸ್ಮರಣೆಯಲ್ಲಿ ಲೀನವಾಗಿರುವವನು, ಹೃದಯದಲ್ಲಿ ಸತ್ಯವಿರಿಸಿಕೊಂಡವನು ಮಾತ್ರ ನಿಜವಾದ ವೈರಾಗಿ. ನಾಮವನ್ನುಳಿದು ಯೋಗವು ಸಂಭವವಿಲ್ಲವೆಂಬುದನ್ನು ಚೆನ್ನಾಗಿ ಹೃದಯದಲ್ಲಿ ಯೋಚಿಸಿ ತಿಳಿಯಿರಿ ಎಂದು ನಾನಕನು ಹೇಳುತ್ತಾನೆ.

(೯೪೬)

## ಸೃಷ್ಟಿ ಏಕೆ ?

(೨೭)

ಈ ಮಲ್ಲ – ಯುದ್ಧ – ಆಯೋಜನವು ಅವನದೇ; ಈ ಗರಡಿ ಮನೆಯನ್ನು ಅವನೇ ರಚಿಸಿದವನು. ಕಾಮಾದಿ ಗಳು ಉಪದ್ರವ ಮಾಡುತ್ತ ಕಾದಾಡಲು ಗರಡಿಮನೆಯಲ್ಲಿ ಇಳಿದವು; ಗುರುಮುಖನೂ ಅವನ್ನು ಕಂಡು ಜ್ವಲಿತರಾದನು. ಗುರುಮುಖನು ಮನಮುಖರನ್ನೂ ಮೂರ್ಖರನ್ನೂ ಕೆಡವಿ ಸೋಲಿಸಿದನು. ಅವನು ಸ್ವತಃ ಕಾದಾಡುವನು, ಸ್ವತಃ ಹೊಡೆಯುವನು, ಕಾರ್ಯವನ್ನು ಸ್ವತಃ ಮಾಡುವನು.

(೧೨೮೦)

(೨೮)

ಸತ್ಯನು ಗುರುಮುಖರಿಗಾಗಿ ಧರಿತ್ರಿಯನ್ನು ಸೃಜಿಸಿದನು. ಉತ್ಪತ್ತಿ ಹಾಗೂ ನಾಶವು ಅವನ ಸ್ವಂತದ ಲೀಲೆ. ಗುರುವಿನ ಶಬ್ದದಲ್ಲಿ ತಲ್ಲೀನರಾದವರು ಸತ್ಯಲೀನರಾಗಿ ಸನ್ಮಾನಪೂರ್ವಕವಾಗಿ ಮನೆಗೆ ತೆರಳುವರು. ಸತ್ಯ ಶಬ್ದದ ಹೊರತು ಮಾನ್ಯತೆ ದೊರೆಯದು. ನಾಮವನ್ನುಳಿದು ಸತ್ಯದಲ್ಲಿ ಬೆರೆಯುವುದು ಹೇಗೆಂದು ನಾನಕನು ಕೇಳುತ್ತಾನೆ.

(೯೪೧)

(೨೯)

ಸಂತರ ಸಲುವಾಗಿ ಪ್ರಭುವು ತ್ರಿಭುವನಗಳನ್ನು ರಚಿಸಿರುವನು; ಆತ್ಮವನ್ನು ಅರಿತು ತತ್ವಚಿಂತನ ಮಾಡು ವವನೇ ಸಂತ; ಸತ್ಯಹೃದಯದಲ್ಲಿ ಸತ್ಯಪ್ರೇಮಗಳು ನೆಲಸುತ್ತವೆ. ಇಂಥ ಸಂತನ ದಾಸನು ತಾನೆಂದು ನಾನಕನು ವಿನಯದಿಂದ ಹೇಳುವನು.

(೨೨೪)

# ಜೀವಾತ್ಮಾ, ಅಹಂಕಾರ, ಕರ್ಮ-ಸಿದ್ಧಾಂತ ಔರ ಆವಾಗಮನ

ಹುಕಮೀ ಹೋವನಿ ಜೀಅ, ಹುಕಮಿ ಮಿಲೈ ವಡಿಆಈ।[1]
ಜಪು ಪಉಡೀ ೨

1. ಹುಕುಮಿನಿಂದ ಸರ್ವ ಜೀವಗಳು ಹುಟ್ಟುವವು, ಹುಕುಮಿನಿಂದ ದೊರಕುವದು ಮಹಿಮೆ

## ಜೀವಾತ್ಮಾ ಅಮರ ಹೈ

(೩೦)

ಪಉಣ ಪಾಣೀ ಅಗನೀ ಕಾ ಮೇಲು ॥ ಚಂಚಲ ಚಪಲ ಬುಧಿ ಕಾ ಖೇಲು ॥
ನಉ ದರವಾಜೆ ದಸವಾ ದುಆರು ॥ ಬುರ್ಝುರೆ ಗಿಆನೀ ಏಹು ಬೀಚಾರು ॥ ೧ ॥
ಕಥತಾ ಬಕತಾ ಸುನತಾ ಸೋಈ ॥ ಆಪು ಬೀಚಾರೆ ಸು ಗಿಆನೀ ಹೋಈ ॥ ೧ ॥ ರಹಾಉ ॥
ದೇಹಿ ಮಾಟಿ ಬೋಲ್ಯೈ ಪಉಣು ॥ ಬುರ್ಝೂರೆ ಗಿಆನೀ ಮೂಆ ಹೈ ಕಉಣು ॥
ಮೂಈ ಸುರತಿ ವಾದು ಅಹಂಕಾರು ॥ ಓಹು ನ ಮುಆ ಜೋ ದೇಖಣಹಾರು ॥ ೨ ॥
ಜೈ ಕಾರಣಿ ತಟಿ ತೀರಥ ಜಾಹೀ ॥ ರತನ ಪದಾರಥ ಘಟ ಹೀ ಮಾಹೀ ॥
ಪಡಿ ಪಡಿ ಪಂಡಿತು ಬಾದು ಬಖಾನ್ನೈ ॥ ಭೀತರಿ ಹೋವೀ ವಸತು ನ ಜಾಣ್ಯೈ ॥ ೩ ॥
ಹಉ ನ ಮುಆ ಮೇರಿ ಮುಈ ಬಲಾಇ ॥ ಓಹು ನ ಮೂಆ ಜೋ ರಹಿಆ ಸಮಾಇ ॥
ಕಹು ನಾನಕ ಗುರಿ ಬ್ರಹಮು ದಿಖಾಇಆ ॥ ಮರತಾ ಜಾತಾ ನದರಿ ನ ಆಇಆ ॥ ೪ ॥ ೪ ॥

ಗಉಡೀ ೪

## ಜೀವಾತ್ಮಾ ಕೀ ಆತ್ಮಾ ರಾಮು ಹೈ

(೩೧)

ಆತಮ ಮಾಹೀ ರಾಮು ರಾಮ ಮಹಿ ಆತಮು ಚೀನಸಿ ಗುರು ಬೀಚಾರಾ ॥
ಅಮೃತ ವಾಣೀ ಸಬದಿ ಪಛಾಣಿ ದುಖ ಕಾಟ್ಯೈ ಹಉ ಮಾರಾ ॥ ೧ ॥
ನಾನಕ ಹಉಮೈ ರೋಗ ಬುರೆ ॥
ಜಹ ದೇಖಾ ತಹ ಏಕೋ ವೇದನ ಆಪೆ ಬಖಸ್ಸೈ ಸಬದಿ ಧುರೆ ॥ ರಹಾಉ ॥

ಭೈರಉ ಅಸಟಪದೀಆ

## ಅಹಂ ವ ಅಹಂಕಾರ

(೩೨)

ಹಉಮೈ ಕರತ್ ಭೇಖೀ ನಹೀ ಜಾನಿಆ ॥ ಗುರುಮುಖಿ ಭಗತಿ ವಿರಲೆ ಮನು ಮಾನಿಆ ॥ ೧ ॥
ಹಉ ಹಉ ಕರತ ನಹಿ ಸಚು ಪಾಈಐ ॥ ಹಉಮೈ ಜಾಇ ಪರಮು ಪದು
ಪಾಈಐ ॥ ೧ ॥ ರಹಾಉ ॥
ಹಉಮೈ ಕರಿ ರಾಜೆ ಬಹು ಧಾವಹಿ ॥ ಹಉಮೈ ಖಪಹಿ ಜನಮಿ ಮರಿ ಆವಹಿ ॥ ೨ ॥
ಹಉಮೈ ನಿವರೈ ಗುರ ಸಬದು ಬೀಚಾರೈ ॥ ಚಂಚಲ ಮತಿ ತಿಆಗೈ ಪಂಚ ಸಂಘಾರೈ ॥ ೩ ॥
ಅಂತರಿ ಸಾಚು ಸಹಜ ಘರಿ ಆವಹಿ ॥ ರಾಜನು ಜಾಣಿ ಪರಮು ಗತಿ ಪಾವಹಿ ॥ ೪ ॥
ಸಚು ಕರಣೀ ಗುರು ಭರಮು ಚುಕಾವೈ ॥ ನಿರಭವು ಕೈ ಧರಿ ತಾಡೀ ಲಾವೈ ॥ ೫ ॥
ಹಉ ಹಉ ಕರಿ ಮರಿಣಾ ಕಿಆ ಪಾವೈ ॥ ಪೂರಾ ಗರು ಭೇಟ್ಯೈ ಸೋಝುಗುರು ಚುಕಾವೈ ॥ ೬ ॥
ಜೇತೀ ಹೈ ತೇತೀ ಕಿಹು ನಾಹೀ ॥ ಗುರಮುಖಿ ಗಿಆನೆ ಭೇಟಿ ಗುಣ ಗಾಹೀ ॥ ೭ ॥
ಹಉಮೈ ಬಂಧನ ಬಂಧಿ ಭವಾವೈ ॥ ನಾನಕ ರಾಮು ಭಗತಿ ಸುಖು ಪಾವೈ ॥ ೮ ॥ ೧೩ ॥

ಗಉಡೀ ಅಸಟಪದೀಆ

## ಜೀವಾತ್ಮನು ಅಮರನು

(೩೦)

ಪವನ, ಜಲ, ಅಗ್ನಿಗಳ ಮೇಳ ಈ ಶರೀರ; ಇದರಲ್ಲಿ ಚಂಚಲ, ಚಪಲ, ಬುದ್ಧಿಯ ಆಟ. ಒಂಬತ್ತು ಬಾಗಿಲುಗಳು, ಹತ್ತನೆಯ ದ್ವಾರವೂ ಒಂದುಂಟು. ಜ್ಞಾನಿಯೇ, ಇದನ್ನು ತಿಳಿದು ನೋಡು. ಅವನೇ ವಕ್ತಾ, ಶ್ರೋತಾ ಮತ್ತು ವ್ಯಾಖ್ಯಾತಾ. ಆತ್ಮವಿಚಾರ ಮಾಡುವವನೇ ಜ್ಞಾನಿ. ಮಣ್ಣಿನಿಂದಾದುದು ಈ ಶರೀರ, ಇದರಲ್ಲಿ ಮಾತಾಡುವುದು ಪವನ; ಜ್ಞಾನಿಯೇ ಯಾರಿಗೆ ಸಾವು ಎಂಬುದನ್ನು ಅರಿತುಕೊ. ಸಾಯುವುದು ಸುರತಿ, ವ್ಯರ್ಥ ಅಹಂಕಾರ; ಇದನ್ನು ನೋಡುವವನು ಸಾಯುವುದಿಲ್ಲ. ಯಾರಿಗೋಸ್ಕರ ತೀರ್ಥಯಾತ್ರೆ ಮಾಡುವರೋ ಆ ರತ್ನಪದಾರ್ಥ – ಅವನು ಅವರ ಶರೀರದಲ್ಲಿಯೇ ಇರುವನು. ಪಂಡಿತರು ಓದುವರು, ವಾದಮಾಡುವರು; ತಮ್ಮೊಳಗಿರುವ ವಸ್ತುವನ್ನೇ ಅರಿಯರು. ನಾನು ಸಾಯಲಿಲ್ಲ, ಆದರೆ ಸಾಯುವುದು ನನ್ನ ಅವಿದ್ಯೆ. ರೋಮ ರೋಮದಲ್ಲಿ ವ್ಯಾಪಿಸಿದವನು ಸಾಯಲಿಲ್ಲ. ಗುರು ಬ್ರಹ್ಮನನ್ನು ತೋರಿಸಿದನು, ಯಾರೂ ಸಾಯುವುದು ಕಾಣೆಸದು ಎಂದು ನಾನಕನು ಹೇಳುತ್ತಾನೆ.

(೧೫೨)

## ಜೀವಾತ್ಮನ ಆತ್ಮನು ರಾಮನು

(೩೧)

ಆತ್ಮನಲ್ಲಿ ರಾಮನು, ರಾಮನಲ್ಲಿ ಆತ್ಮನು ಎಂಬುದನ್ನು ಗುರುವಿನ ಉಪದೇಶದಿಂದ ಅರಿಯುವಿ. ಶಬ್ದದಿಂದ ತಿಳಿಯುವಿ ಗುರುವಿನ ಅಮೃತವಾಣಿಯನ್ನು; ಅದು ದುಃಖವನ್ನು ಕಳೆಯುವುದು, ಅಹಂಕಾರವನ್ನು ಕೊಲ್ಲುವುದು. ಅಹಂಕಾರದ ರೋಗವು ಕೆಟ್ಟುದೆಂದು ನಾನಕನು ಹೇಳುತ್ತಾನೆ. ನೋಡಿದಲ್ಲಿ ಕಾಣುವುದು ಅದೇ ವೇದನೆ. ಧುರದಿಂದ (ಅಚ್ಚಿನಿಂದ) ಹೊರಟ ಶಬ್ದದ ಮುಖಾಂತರವಾಗಿ ಆ ನಿರಂಕಾರನೇ ಮುಕ್ತಿಯನ್ನು ಕೊಡುವನು.

(೧೧೫೩)

(೩೨)

## ಅಹಮ್ ಮತ್ತು ಅಹಂಕಾರ

ಅಹಂಕಾರಪಡುತ್ತ ಬಹು ವೇಷ ತಾಳಿದರು, ಆದರೆ ಅವನನ್ನು ಅರಿಯಲಾರದೆ ಹೋದರು; ಭಕ್ತಿಯ ಮುಖಾಂತರ ಅಪರೂಪವಾಗಿ ಗುರುಮುಖರು ಅವನನ್ನು ಅರಿಯುವರು. ಅಹಮ್ ಇರುವವರೆಗೆ ಸತ್ಯನನ್ನು ಹೊಂದಲಾರದು; ಅಹಂಕಾರದ ನಾಶದಿಂದಲೇ ಪರಮಪದ ದೊರೆವುದು. ಅಹಂಕಾರಕ್ಕೆ ವಶರಾಗಿಯೆ ರಾಜರು ಒಬ್ಬರು ಇನ್ನೊಬ್ಬರ ಮೇಲೆ ದಾಳಿ ಮಾಡುವರು; ಅಹಂಕಾರದಿಂದಾಗಿಯೇ ನಿರ್ವಹಿಸುವರು, ಜನ್ಮ – ಮರಣಗಳನ್ನು ಪಡೆಯುವರು. ಗುರು ಶಬ್ದ ವಿಚಾರಣ – ಚಿಂತನದಿಂದ ಅಹಂಕಾರದ ನಿವಾರಣ ಆಗುವುದು. ಚಂಚಲ ಬುದ್ಧಿಯನ್ನು ಬಿಡುವುದರಿಂದ ಪಂಚವೈರಿಗಳ (ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರಗಳ) ನಾಶವಾಗುವುದು. ಅಂತರಂಗದಲ್ಲಿ ಸತ್ಯನು ನೆಲಸಿದಲ್ಲಿ ವ್ಯಕ್ತಿ ಸಹಜಾವಸ್ಥೆಯನ್ನು ತಲಪುವನು. ಆ ಮಹಾರಾಜನನ್ನು ಅರಿತು ಪರಮಗತಿಯನ್ನು ಪಡೆಯುವನು. ಗುರುವು ಅವನ ಭ್ರಮೆಯನ್ನು ದೂರ ಮಾಡುವನು, ಅವನ ವ್ಯವಹಾರದಲ್ಲಿ ಸತ್ಯವು ಬರುವುದು, ನಿರ್ಭಯ ಪದದಲ್ಲಿ ಅವನ ಮನವು ಲೀನವಾಗುವುದು. ಅಹಂಕಾರದಲ್ಲಿಯೆ ಮುಳುಗೇಳುವವರು ಏನನ್ನು ಪಡೆಯುವರು ? ಪೂರ್ಣ ಗುರುವು ದೊರೆತರೆ ಎಲ್ಲ ಜಗಳಗಳು ಇಲ್ಲದಂತಾಗುವವು. ಕಾಣುತ್ತಿರುವುದೆಲ್ಲವೂ ನಾಶವಾಗುವಂತಹದು. ಗುರುಜ್ಞಾನ ಪಡೆದು ಅವನ ಗುಣಗಾನವನ್ನು ಮಾಡುವರು. ಅಹಂಕಾರವು ಒಂದು ಬಂಧನ, ಅದು ವ್ಯಕ್ತಿಗಳನ್ನು ಬೇರೆ ಬೇರೆ ಯೋನಿಗಳಲ್ಲಿ ಅಲೆದಾಡಿಸುತ್ತದೆ. ರಾಮನ ಭಕ್ತಿಯಿಂದಲೇ ಸುಖಪ್ರಾಪ್ತಿ ಎಂದು ನಾನಕನು ಹೇಳುತ್ತಾನೆ. (೨೨೬ – ೨೭)

(೩೩)

ಹಉಮೈ ಕರೀ ತಾ ತೂ ನಾಹೀ ತೂ ಹೋವಹಿ ಹಉನಾಹಿ ॥
ಭೂಝುಹು ಗಿಆನೀ ಭೂಝಣಾ ಏಹ ಅಕಥ ಕಥಾ ಮನ ಮಾಹಿ ॥
ಬಿನು ಗುರ ತತು ನ ಪಾಈಐ ಅಲಖು ಬಸೈ ಮಲ ಮಾಹಿ ॥
ಸತಿಗುರು ಮಿಲೈ ತ ಜಾಣೀ ಐಜಾ ಸಬದು ಬಸೈ ಮನ ಮಾಹಿ ॥
ಆಪು ಗಇಆ ಭ್ರಮ್ ಭಉ ಗಇಆ ಜನಮ ಮರನ ದುಖ ಜಾಹಿ ॥
ಗುರಮತಿ ಅಲಖು ಲಖಾಈಐ ಊತ್ತಮ ಮತಿ ತರಾಹಿ ॥
ನಾನಕ ಸೋಹಂ ಹಂಸಾ ಜಪು ಜಾಪಹು ತ್ರಿಭವಣ ತಿಸೈ ಸಮಾಹಿ ॥ ೧ ॥ ಮಂ ೨ ॥

ವಾರ ಮಾರೂ, ಸಲೋಕ ೧, ಪಉಡೀ ೧೯.

## ಕರ್ಮಸಿದ್ಧಾಂತ

(೩೪)

ಪದೈ ದೋಸು ನ ದೇಉ ಕಿಸೈ ದೋಸು ಕರಮಾ ಅಪಣಿಆ ॥
ಜೋ ಮೈ ಕೀಆ ಸೋ ಮೈ ಪಾಇಆ ದೋಸು ದೀಜೆ ಅವರ ಜನಾ ॥ ೨ ॥
ಧಧೈ ಧಾರಿ ಕಲಾ ಜಿನಿ ಛೋಡೀ ಹರಿ ಚೀಜೀ ಜಿನಿ ರಂಗ ಕೀಆ ॥
ತಿಸ ದಾ ದೀಆ ಸಭನೀ ಲೀಆ ಕರಮಿ ಕರಮಿ ಹುಕಮು ಪಇಆ ॥ ೨೨ ॥

(೩೫)

ನಾನಕ ಜೀಅ ಉಪಾಇ ಕೈ ಲಿಖಿ ನಾವೈ ಧರಮು ಬಹಾಲಿಆ ॥
ಓಥೈ ಸಚೋ ಹೀ ಸಚಿ ನಿಬಡೈ ಚುಣಿ ವಖಿ ಕಢೈ ಜಜಮಾಲಿಆ ॥
ಥಾವು ನ ಪಾಇನಿ ಕೂಡಿಆರ ಮುಹ ಕಾಲ್ಹೈ ದೋಜಕಿ ಚಾಲಿಆ ॥
ತೇರೈ ನಾಇ ರತೆ ಸೇ ಜಿಣಿ ಗಏ ಹಾರಿ ಗಏ ਸਿ ಠਗಣ ವಾਲਿਆ ॥
ಲಿಖಿ ನಾವೈ ಧರಮು ಬಹಾಲಿ ಆ ॥ ೨ ॥
ಆಪೀನ್ಹೈ ಭೋಗ ಭೋಗಿ ಕೈ ಹೋಇ ಭಸಮಡಿ ಭಉರು ಸಿಧಾಇಆ ॥
ವಡಾ ಹೋಆ ದುನೀದಾರು ಗಲಿ ಸಂಗಲು ಘತಿ ಚಲಾಇಆ ॥
ಅಗೈ ಕರಣೀ ಕೀರತಿ ವಾಚೀಐ ಬಹಿ ಲೇಖಾ ಕರಿ ಸಮಝಾಇಆ ॥
ಥಾಉ ನ ಹೋਵੀ ಪਉਦੀ ಈ ಹುಣਿ ಸುಣੀಐ ಕਿਆ ರੂਆਇਆ ॥
ಮਨਿ ਅੰಧೈ ಜನಮು ಗವਾਇਆ ॥ ೩ ॥
ಪਡਿಆ ਹೋਵੈ ಗੁನಹਗਾರੂ ತਾ ਓਮਿ ಸਾਧੂ ನ ಮਾਰੀਐ ॥
ಜੇಹಾ ಘಾਲੇ ಘಾಲಣಾ ತೇವೇಹੋ ನಾਉ ಪಚಾರೀਐ ॥
ಐಸೀ ಕਲಾ ನ ਖੇਡੀਐ ಜਿਤು ದਰਗਹ ಗਇਆ ಹਾਰੀਐ ॥
ಪಡਿਆ ಅਤੈ ಓਮਿಆ ವೀಚਾਰು ಅಗೈ ವੀਚਾਰੀਐ ॥
ಮುਹਿ ಚਲੈ ಸು ಅಗੈ ಮਾਰೀਐ ॥ ೧೨ ॥

ವಾರ ಆಸಾ, ಪಉಡೀ ೨, ೩ ವ ೧೨.

(೩೩)

ನಾನು ಇರುವ ತನಕ ನೀನು ಇಲ್ಲ. ನೀನು ಇರುವ ತನಕ ನಾನು ಇಲ್ಲ. ಓ ಜ್ಞಾನಿಯೆ ವಿವರಿಸಲಾರದ ಈ ಉಕ್ತಿಯನ್ನು ಮನದಲ್ಲಿ ಅರಿತುಕೊ. ಅಲಕ್ಷ್ಯನು, ಅಗೋಚರನು ಸರ್ವರಲ್ಲಿ ನೆಲಸಿರುವನು; ಗುರುವಿಲ್ಲದೆ ಈ ತತ್ವದ ಜ್ಞಾನವಾಗದು. ಸದ್ಗುರು ದೊರೆತ ಮೇಲೆ ಮನದಲ್ಲಿ ಶಬ್ದವು ತುಂಬುವುದು, ಆಗ ಆಗುವುದು ಅರಿವು. ಅಹಮ್ ಹೋದರೆ ಭ್ರಮೆಯೂ ಭಯವೂ ಹೋಯಿತು, ಜನನ – ಮರಣದ ದುಃಖ ನಾಶವಾಯಿತು ಎಂದು ತಿಳಿ. ಗುರುಮತಿ ಅಗೋಚರನನ್ನು ತೋರಿದನು; ಉತ್ತಮ ಮತಿಯಿಂದಲೇ ಪಾರುಗಾಣುವಿರಿ. ಸೋಹಮ್‌ನನ್ನು ಜಪಿಸಿರಿ, ಅವನೇ ತ್ರಿಭುವನದಲ್ಲಿ ತುಂಬಿರುವನು ಎಂದು ನಾನಕನು ಹೇಳುತ್ತಾನೆ.

(೧೯೨ – ೯೩)

## ಕರ್ಮಸಿದ್ಧಾಂತ

(೩೪)

ಯಾರಮೇಲೆ ಏಕೆ ದೋಷ ಹೊರಿಸುವಿ ? ದೋಷವು ನಮ್ಮ ಕರ್ಮಗಳದ್ದು. ನಾನು ಮಾಡಿದುದರ ಫಲವನ್ನೇ ಪಡೆದಿರುವೆನು, ಬೇರಾರ ಮೇಲೂ ಇದರ ದೋಷವಿಲ್ಲ. ಯಾವನು ತನ್ನ ಕಲೆಯಿಂದ ಈ ಜಗತ್ತನ್ನು ಧಾರಣಮಾಡಿದ್ದಾನೋ, ಯಾವನು ಪ್ರತಿಯೊಂದು ವಸ್ತುವಿಗೆ ಬಣ್ಣವಿತ್ತಿದ್ದಾನೋ, ಅವನು ಅವರವರ ಕರ್ಮಾನುಸಾರ ಹುಕುಮು ಕೊಟ್ಟು ಏನು ಕೊಡುತ್ತಾನೋ ಅದೇ ಎಲ್ಲರಿಗೂ ದೊರೆಯುವುದು.

(೪೬೩)

(೩೫)

ನಾನಕನು ಹೇಳುವನು: ಅವನು ಜೀವಗಳನ್ನು ಹುಟ್ಟಿಸಿದನು, ಅವುಗಳ ಕರ್ಮಗಳ ಲೆಕ್ಕವಿಡಲು ಧರ್ಮವನ್ನು ಸ್ಥಾಪಿಸಿದನು. ಅಲ್ಲಿ ಸತ್ಯದ ಪರೀಕ್ಷೆಯಾಗುವುದು, ಪಾಪಿಗಳನ್ನು ಆಯ್ದು ಬೇರೆ ಮಾಡಲಾಗುವುದು. ಸುಳ್ಳರಿಗೆ ಅಲ್ಲಿ ಸ್ಥಳ ದೊರೆಯದು; ಅವರು ಮುಖ ಕಪ್ಪು ಮಾಡಿಕೊಂಡು ನರಕದೆಡೆಗೆ ಸಾಗುವರು. ನಿನ್ನ ಹೆಸರಲ್ಲಿ ಲೀನರಾದವರು ವಿಜಯಿಗಳಾದರು; ಢೋಂಗಿಗಳು ಸೋತರು. ಇದರ ಲೆಕ್ಕವನ್ನಿಡಲು ಧರ್ಮವನ್ನು ಸ್ಥಾಪಿಸಿದನು. ತನ್ನ ಕರ್ಮಗಳ ಫಲವನ್ನು ಭೋಗಿಸಿ, ಶರೀರವು ಭಸ್ಮೀಭೂತವಾಗಿ ಆತ್ಮವು ಹೊರಟುಹೋಯಿತು. ಪ್ರಾಪಂಚಿಕನು ಸತ್ತುಹೋದ ಬಳಿಕ ಅವನ ಕೊರಳಿಗೆ ಸರಪಳಿ ಹಾಕಿ ಅವನನ್ನು ಮುಂದೆ ಸಾಗಿಸಲಾಯಿತು. ಅಲ್ಲಿ ಕೀರ್ತಿ ಸುಕರ್ಮಿಗೆ ಸಿಗುವುದು, ಅಲ್ಲಿ ವ್ಯಕ್ತಿಯನ್ನು ಕೂಡಿಸಿ ಅವನ ಕರ್ಮದ ಲೆಕ್ಕವನ್ನು ತಿಳಿಸಲಾಗುವುದು. ಅಲ್ಲಿ ದಂಡವು ನಿಶ್ಚಿತ, ಅದರಿಂದ ಬಿಡುಗಡೆ ಸಾಧ್ಯವಿಲ್ಲ; ಅವನ ಅಳುವನ್ನು ಕೇಳುವವರು ಯಾರು ? ಕುರುಡು ಮನವು ವ್ಯರ್ಥವಾಗಿ ಜೀವನ ಹಾಳುಮಾಡಿಕೊಂಡಿತು. ಸಾಕ್ಷರನು ಪಾಪಾಚಾರವನ್ನು ಮಾಡಿದರೆ ಅದರ ಬಗ್ಗೆ ದಂಡವನ್ನು ನಿರಕ್ಷರ ಸಾಧುವಿಗೆ ಕೊಡಲಾಗುವುದೇ ? ಯಾವನ ಕರ್ಮ ಹೇಗೆ ಇರುವದೊ ಹಾಗೆ ಅವನ ಖ್ಯಾತಿ ಹಬ್ಬುವದು. ಪರಲೋಕದಲ್ಲಿ ಪರಾಭವವಾಗದ ಹಾಗೆ ಆಟ ಆಡಿರಿ ಇಲ್ಲಿ. ಅಲ್ಲಿ ಸಾಕ್ಷರರ ಮತ್ತು ನಿರಕ್ಷರರ ವಿಚಾರಗಳ ಮೇಲೆಯೇ ವಿಚಾರಣೆ ನಡೆಯುವುದು. ಸ್ವೇಚ್ಛಾಚಾರಿಗಳಿಗೆ ಅಲ್ಲಿ ಶಿಕ್ಷೆ ಆಗುವುದು.

(೪೬೯ – ೭೦)

## ಕರ್ಮ—ಚಕ್ರ ಕಾ ದುಃಖ ನಾಮಸ್ಮರಣ ಸೆ ಕಟತಾ ಹೈ

(೩೬)

ಕರಣೀ ಕಾಗದು ಮನು ಮಸವಾಣೀ ಬುರಾ ಭಲಾ ದುಇ ಲೇಖ ಪಏ ॥
ಜಿಉ ಜಿಉ ಕಿರತು ಚಲಾಏ ತಿಉ ಚಲೀಐ ತಉ ಗುಣ ನಾಹೀ ಅಂತು ಹರೆ ॥ ೧ ॥
ಚಿತ ಚೇತಸಿ ಕೀ ನಹೀ ಬಾವರಿಆ ॥ ಹರಿ ಬಿಸರತ ತೇರೆ ಗುಣ ಗಲಿಆ ॥ ರಹಾವು ॥
ಜಾಲೀ ರೈನಿ ಜಾಲು ದಿನು ಹೂಆ ಜೇತೀ ಘಡೀ ಫಾಹೀ ತೇ ತೀ ॥
ರಸಿ ರಸಿ ಚೋಗ ಚುಗಹಿ ನಿತ ಫಾಸಹಿ ಛೂಟಸಿ ಮೂಡೆ ಕವನ ಗುಣೀ ॥ ೨ ॥
ಕಾಇಆ ಆರಣು ಮನು ವಿಚಿ ಲೋಹಾ ಪಂಚ ಅಗನಿ ತಿತು ಲಾಗಿ ರಹೀ ॥
ಕೋಇಲೆ ಪಾಪ ಪಡೆ ತಿಸು ಊಪರಿ ಮನು ಜಾಲಿಆ ಸಂನೀ ಚಿಂತ ಭಈ ॥ ೩ ॥
ಭಇಆ ಮನೂರು ಕಂಚನು ಫಿರಿ ಹೋವೈ ಜೇ ಗುರು ಮಿಲೈ ತಿನೇಹಾ ॥
ಏಕು ನಾಮು ಅಮ್ರಿತ ಓಹು ದೇವೈ ತಉ ನಾನಕ ತ್ರಿಸಟಸಿ ದೇಹಾ ॥ ೪ ॥ ೩ ॥

**ಮಾರೂ.**

(೩೭)

ಘರ ದರ ಫಿರಿ ಥಾಕಿ ಬಹುತೇರೆ ॥ ಜಾತಿ ಅಸಂಖ ಅಂತ ನಹೀ ಮೇರೆ ॥
ಕೇತೆ ಮಾತ ಪಿತಾ ಸುತ ಧೀಆ ॥ ಕೇತೆ ಗುರ ಚೇಲೆ ಫುನಿ ಹೂಆ ॥
ಕಾಚೆ ಗುರ ತೇ ಮುಕತಿ ನ ಹೂಆ ॥
ಕೇತಿ ನಾರಿ ವರು ಏಕು ಸಮಾಲಿ ॥ ಗುರುಮುಖಿ ಮರಣು ಜೀವಣು ಪ੍ਰಭ ನಾಲಿ ॥
ದಹದಿಸ ಢೂಢಿ ಘರೈ ಮಹಿ ಪಾਇਆ ॥ ಮೇಲು ಭಇಆ ಸತಿಗುರು ಮಿಲಾਇਆ ॥ ೨೦ ॥

**ರಾಮಕಲೀ ದಖಣೀ, ಓಅಂಕಾರ, ಪਉಡೀ ೨೯.**

(೩೮)

ಜುಡಿ ಜುಡಿ ವಿಛುಡೆ ವಿಛುಡಿ ಜುಡೆ ॥ ಜೀವಿ ಜೀವಿ ಮುಏ ಮುಏ ಜೀವೆ ॥
ಕೇತಿಆ ಕೆ ಬಾಪ ಕೇತಿಆ ಕೆ ಬೇਟੇ ಕೇತೆ ಗುರ ಚೇಲೆ ಹੂਏ ॥
ಆਗੈ ಪਾਛੈ ಗಣತ ನ ಆਵੈ ಕਿਆ ಜಾತੀ ಕಿਆ ಹੁਣਿ ಹੂਏ ॥
ಸਭು ಕರಣਾ ಕਿਰਤੁ ಕਰਿ ਲਿਖੀਐ ಕਰਿ ಕਰਿ ಕਰਤਾ ಕਰੇ ಕਰੇ ॥
ಮਨਮੁਖਿ ಮਰੀਐ ಗੁರಮುಖಿ ತರೀਐ ನਾਨಕ ನਦਰੀ ನਦਰਿ ಕਰೇ ॥ ೨ ॥

**ವಾರ ಸಾರಂಗ, ಸಲೋಕ ೨, ಪਉಡೀ ೬.**

## ಕರ್ಮಚಕ್ರದ ದುಃಖವು ನಾಮಸ್ಮರಣೆಯಿಂದ ದೂರಾಗುವುದು

(೩೬)

ಕರ್ಮವೇ ಕಾಗದ, ಮನವೇ ಮಸಿ; ಒಳಿತು. ಕೆಡುಕು ಹೀಗೆ ಎರಡನ್ನು ಬರೆಯಲಾಗುವುದು. ಕೃತಿಗಳು ನಡೆಸಿದಂತೆ ನಾವು ನಡೆಯುವೆವು; ಓ ಹರಿ, ನಿನ್ನ ಗುಣಗಳು ಅನಂತ. ಓ ಹುಚ್ಚು ಮನವೇ, ನೀನೇಕೆ ಎಚ್ಚೆತ್ತು ಹರಿಸ್ಮರಣೆ ಮಾಡಲಿಲ್ಲ? ಹರಿಯನ್ನು ಮರೆತುದರಿಂದ ನಿನ್ನ ಗುಣಗಳೆಲ್ಲವೂ ನಾಶವಾಗಿ ಹೋದವು. ಹಗಲು ಜಾಲವಾಗಿದೆ, ರಾತ್ರಿಯು ಜಾಳಿಗೆಯಾಗಿದೆ. ಎಷ್ಟು ಗಳಿಗೆಗಳೋ ಅಷ್ಟೇ ನೇಣುಗಳು. ನೀನು ಆನಂದಿತನಾಗಿ ವಿಷಯಾದಿಗಳನ್ನು ಆಯ್ದುಕೊಳ್ಳುತಲಿರುವೆ, ಹೆಚ್ಚುಹೆಚ್ಚಾಗಿ ಅವುಗಳಲ್ಲಿ ಸಿಲುಕಿಕೊಳ್ಳುತ್ತಲಿರುವೆ. ಏ ಮೂರ್ಖ, ಯಾವ ಗುಣವಿದೆ ನಿನ್ನಲ್ಲಿ ಪಾರಾಗಲು? ಈ ಕಾಯವೊಂದು ಭಟ್ಟಿ, ಇದನ್ನು ಪಂಚಾಗ್ನಿಗಳು ಸುಡುತ್ತಿವೆ. ಮನಸ್ಸು ಕಬ್ಬಿಣದಂತೆ ಕಾಯುತ್ತಲಿದೆ. ಪಾಪವೆಂಬ ಇದ್ದಲು ಅದರಲ್ಲಿ ಬಿದ್ದಿದೆ, ಮನವು ಸುಡುತ್ತಿದೆ. ಚಿಂತೆಯೆಂಬ ಚಿಮ್ಮಟಿಗೆ ಅದನ್ನು ಹಿಡಿದುಬಿಟ್ಟಿದೆ. ಮನಸ್ಸು ಸುಟ್ಟಿತು, ಅದು ಸುಟ್ಟು ಲೋಹ ಭಸ್ಮವಾಯಿತು. ಅದು ಪುನಃ ಕಾಂಚನವಾಗಬಲ್ಲದು. ನಾಮಾಮೃತವನ್ನು ಕೊಡುವ ಗುರು ಸಿಕ್ಕರೆ ದೇಹದ ಪಿಪಾಸೆ ಶಾಂತವಾಗುವುದೆಂದು ನಾನಕನು ಹೇಳುತ್ತಾನೆ.

(೯೯೦)

(೩೭)

ಮನೆ ಮನೆ, ಬಾಗಿಲು ಬಾಗಿಲು ಅಲೆದಲೆದು ದಣಿದಿರುವೆ; ನನ್ನ ಜನ್ಮಗಳು ಅಗಣಿತ, ಪಾರುಗಾಣಲಿಲ್ಲ. ಅದೆಷ್ಟು ನನಗೆ ತಂದೆ, ತಾಯಿ, ಪುತ್ರ, ಪುತ್ರಿಯರು; ಎಷ್ಟೋ ಗುರುಗಳ ಶಿಷ್ಯನಾದೆ. ಅಪಕ್ವ ಗುರುವಿನಿಂದ ಮುಕ್ತಿದೊರಕಲಿಲ್ಲ; ಹೆಂಡಂದಿರೂ ಅನೇಕ, ಅವರಿಗೆ ಒಬ್ಬ ವರನ ಆಶ್ರಯವಿದೆ. ಗುರುಮುಖನ ಜೀವನ–ಮರಣವು ಪ್ರಭುವಿನ ಅಧೀನ. ಹತ್ತೂ ದಿಕ್ಕುಗಳಲ್ಲಿ ಅವನನ್ನು ಹುಡುಕಿದೆ, ಕೊನೆಗೆ ಅವನನ್ನು ಮನೆಯಲ್ಲಿಯೆ ಕಂಡೆ. ಸದ್ಗುರುವಿನ ಭೆಟ್ಟಿಯಾಯಿತು; ಅವನು ನನ್ನನ್ನು ಪ್ರಭುವಿನೊಡನೆ ಸೇರಿಸಿದನು.

(೯೩೨)

(೩೮)

ಜೀವಾತ್ಮರು ಅನೇಕ ಶರೀರ ಧಾರಣಮಾಡಿದರು, ಬೇರೆಯಾದರು, ಪುನಃ ಶರೀರ ಧಾರಣಮಾಡಿದರು. ಜೀವಿಸಿದ್ದು ಸತ್ತರು; ಸತ್ತು ಪುನಃ ಹುಟ್ಟಿದರು. ಎಷ್ಟೋ ಜನರ ತಂದೆ, ಎಷ್ಟೋ ಜನರ ಮಕ್ಕಳು ಎಷ್ಟೋ ಗುರುಗಳ ಶಿಷ್ಯರು ಆದರು. ಮುಂದೆ, ಹಿಂದೆ ಮತ್ತು ಈಗ ನಾವು ತಾಳಿದ ಜನ್ಮಗಳ ಹಾಗು ಜಾತಿಗಳ ಲೆಕ್ಕಮಾಡುವುದು ಅಸಾಧ್ಯ. ಯಾವ ಕರ್ಮ ಮಾಡಿದೆವೊ, ಯಾವ ಕರ್ಮ ಮಾಡುತ್ತಿರುವೆವೊ ಆ ಎಲ್ಲವನ್ನೂ ಭಾಗ್ಯದಲ್ಲಿ ಬರೆಯಲಾಗಿದೆ. ಕರ್ತಾರನು ನಮ್ಮನ್ನು ಮತ್ತೆ ಮತ್ತೆ ಉಂಟುಮಾಡುವನು. ಮನಮುಖರು ಪಾರುಗಾಣುವರು; ನಿರಂಕಾರನು ದಯಾಘನನು, ಅವನು ದಯೆ ತೋರುವನು ಎಂದು ನಾನಕನು ಹೇಳುತ್ತಾನೆ.

(೧೨೩೮)



 

# ಮುಕ್ತಿ ਔਰ ನದರ

(ಮುಕ್ತಿ ಮತ್ತು ನಿರ್ಭಯತೆ)

ಕರಮಿ ಅವ್ಯೆ ಕಪಡಾ, ನದರೀ ಮೋಖು ದುಆರು ।[1]

ಜಪು ಪಉಡೀ ೪

1. ಕರ್ಮಫಲದಿಂದ ದೊರೆವುದು ಶರೀರ, ಮುಕ್ತಿ ದೊರೆವುದು ಪ್ರಭುವಿನ ಪ್ರಸಾದದಿಂದ.

(2)

(೩೯)

ಅದಿಆತಮ ಕರಮ ಕರೆ ತಾ ಸಾಚಾ ॥ ಮುಕತಿ ಭೇದು ಕಿಆ ಜಾಣೈ ಕಾಚಾ ॥
ಐಸಾ ಜೋಗಿ ಜುಗತಿ ಬೀಚಾರೈ ॥ ಪಂಚ ಮಾರಿ ಸಾಚು ಉರಿಧಾರೈ ॥ ೧ ॥
ಜಿಸ ಕೈ ಅಂತರಿ ಸಾಚು ವಸಾವೈ ॥ ಜೋಗ ಜುಗತಿ ಕೀ ಕೀಮತಿ ಪಾವೈ ॥ ೨ ॥
ರವಿ ಸಸಿ ಏಕೊ ಗೃಹ ಉದಿಆನೈ ॥ ಕರಣೀ ಕೀರತಿ ಕರಮ ಸಮಾನೈ ॥ ೩ ॥
ಏಕ ಸಬದ ಇಕ ಭಿಖಿಆ ಮಾಗೈ ॥ ಗಿಆನು ಧಿಆನು ಜುಗತಿ ಸಚು ಜಾಗೈ ॥ ೪ ॥
ಭೈ ರಚಿ ರಹೈ ನ ಬಾಹರಿ ಜಾಇ ॥ ಕೀಮತಿ ಕಉಣ ರಹೈ ಲಿವ ಲಾಇ ॥ ೫ ॥
ಆಪೆ ಮೇಲೆ ಭರಮು ಚುಕಾಏ ॥ ಗುರು ಪರಸಾದಿ ಪರಮ ಪದು ಪಾಏ ॥ ೬ ॥
ಗುರ ಕೀ ಸೇವಾ ಸಬದು ವೀಚಾರು ॥ ಹಉಮೈ ಮಾರೆ ಕರಣೀ ಸಾರು ॥ ೭ ॥
ಜಪ ತಪ ಸಂಜಮ ಪಾಠ ಪುರಾಣು ॥ ಕಹು ನಾನಕ ಅಪರಂಪರ ಮಾನು ॥ ೮ ॥ ೯ ॥

**ಗಉಡೀ ಅಸಟಪದೀಆ**

(೪೦)

ಲೇಖ ಅಸಂಖ ಲಿಖಿ ಲಿಖಿ ಮಾನು ॥ ಮನಿ ಮಾನಿಐ ಸಚು ಸುರತಿ ಬಖಾನು ॥
ಕಥನೀ ಬದನೀ ಪಡಿ ಪಡಿ ಭಾರು ॥ ಲೇಖ ಅಸಂಖ ಅಲೇಖು ಅಪಾರು ॥ ೧ ॥
ಐಸಾ ಸಾಚಾ ತೂ ಏಕೊ ಜಾಣು ॥ ಜಂಮಣು ಮರಣಾ ಹುಕಮು ಪಛಾಣು ॥ ರಹಾಉ ॥
ಮಾಇಆ ಮೋಹಿ ಜಗು ಬಾಂಧಾ ಜಮಕಾಲಿ ॥ ಬಾಂಧಾ ಛೂಟೈ ನಾಮು ಸಮಾಲಿ ॥
ಗುರು ಸುಖದಾತಾ ಅವರು ನ ಭಾಲಿ ॥ ಹಲತಿ ಪಲತಿ ನಿಬಹಿ ತುಧು ನಾಲಿ ॥ ೨ ॥
ಸಬದಿ ಮರೈ ತಾಂ ಏಕ ಲಿವ ಲಾಏ ॥ ಅಚರು ಚರೈ ತ ಭರಮು ಚುಕಾಏ ॥
ಜೀವನ ಮುಕತಿ ಮನಿ ನಾಮು ಬಸಾಏ ॥ ಗುರಮುಖಿ ಹೋಇ ತ ಸಚಿ ಸಮಾಏ ॥ ೩ ॥
ಜಿನಿ ಧರ ಸಾಜೀ ಗಗನು ಆಕಾಸು ॥ ಜಿನಿ ಸಭ ಥಾಪೀ ಥಾಪಿ ಉಥಾಪಿ ॥
ಸರಬ ನಿರಂತರಿ ಆಪೆ ಆಪಿ ॥ ಕಿಸೈ ನ ಪೂಛೈ ಬಖಸೆ ಆಪಿ ॥ ೪ ॥

**ಆಸಾ ಅಸಟಪದೀಆ.**

(೩೯)

ಆಧ್ಯಾತ್ಮಿಕ ಕರ್ಮ ಮಾಡುವವನೇ ನಿಜವಾದ ಸಾಧಕನು. ಕಚ್ಚಾ ಸಾಧಕನು ಮುಕ್ತಿಭೇದವನ್ನು ಹೇಗೆ
ಅರಿಯಬಲ್ಲನು? ಪಂಚವೈರಿಗಳನ್ನು ಕೊಂದು, ಸತ್ಯವನ್ನು ಹೃದಯದಲ್ಲಿ ಧರಿಸಿಕೊಂಡ ಯೋಗಿಯೆ ಮುಕ್ತಿ
ಯನ್ನು ಅರಿಯಬಲ್ಲನು. ಯಾರ ಮನದಲ್ಲಿ ಸತ್ಯವು ನೆಲಸುವುದೋ ಅವನೇ ಯೋಗದ, ಮುಕ್ತಿಯ
ಬೆಲೆಯನ್ನು ಅರಿಯಬಲ್ಲನು. ಅವನಿಗೆ ಮನೆ ಹೇಗೋ ಹಾಗೆಯೆ ಉದ್ಯಾನವೂ ಕೂಡ; ರವಿ ಮತ್ತು
ಚಂದ್ರರಲ್ಲಿ ಅಂತರ ಎಂತಹದು? ಅವನು ಸತ್ಕರ್ಮಗಳಲ್ಲಿ, ಪ್ರಭುವಿನ ಸ್ತುತಿಯಲ್ಲಿ ಮಗ್ನನಾಗಿರುವನು.
ಜ್ಞಾನ, ಧ್ಯಾನ ಮತ್ತು ಯುಕ್ತಿಗಳು ಸತ್ಯವನ್ನು ಪ್ರಜ್ವಲಗೊಳಿಸುವುವು. ಅವನು ನಿರಂಕಾರನ ಭಯ
ದಲ್ಲಿರುವನು ಮತ್ತು ಆ ಭಯದಿಂದ ಎಂದೂ ದೂರಾಗಿರನು. ನಿತ್ಯವೂ ಪ್ರಭುವಿನಲ್ಲಿ ಯಾವನ ಪ್ರೇಮವು
ತೊಡಗಿರುವುದೊ ಅದರ ಬೆಲೆಯನ್ನು ಕಟ್ಟುವವರಾರು? ಪ್ರಭು ಸ್ವತಃ ಅವನ ಭ್ರಮೆಯನ್ನು ದೂರ
ಮಾಡುವನು ಮತ್ತು ತನ್ನಲ್ಲಿ ಸೇರಿಸಿಕೊಳ್ಳುವನು. ಗುರುಪ್ರಸಾದದಿಂದ ಅವನಿಗೆ ಪರಮ ಪದ
ದೊರೆವುದು. ಶಬ್ದವನ್ನು ಕುರಿತು ಚಿಂತನ ಮಾಡುವುದೇ ಗುರುಸೇವೆ; ಅಹಮ್ಮಿನ ನಾಶವೇ ಸರ್ವೋತ್ತಮ
ಕರ್ಮ. ಅಪರಂಪರ ಪ್ರಭುವಿನಲ್ಲಿ ಆಸ್ಥೆಯನ್ನಿಡುವುದೇ ಜಪ, ತಪ, ಸಂಯಮ, ಪಾಠ, ಪುರಾಣವೆಂದು
ನಾನಕನು ಹೇಳುತ್ತಾನೆ.

(೨೨೩)

(೪೦)

ಅಸಂಖ್ಯ ಲೇಖನಗಳನ್ನು ಬರೆಬರೆದು ಲೇಖಕರಿಗೆ ಗರ್ವವುಂಟಾಗುವುದು. ಪ್ರಭುವಿನಲ್ಲಿ ಮನವು ಲೀನ
ವಾದರೆ ಮತ್ತು ಬುದ್ಧಿ ಸತ್ಯವನ್ನು ಕೊಂಡಾಡುವುದು. ಕಥನ, ವಾದನ ಮತ್ತು ಪಠಣ ಇವು ಮನಕ್ಕೆ
ಭಾರ; ಲೇಖಗಳು ಅಸಂಖ್ಯ, ಅಲೇಖಗಳು ಅಪಾರ. ಸತ್ಯವು ಒಂದೇ ಎಂದು ತಿಳಿಯಿರಿ. ಜನ್ಮ—ಮರಣ
ಗಳು ಅವನ ಹುಕುಮಿನಿಂದಲೇ ಎಂದು ಗುರುತಿಸಿಕೊಳ್ಳಿ. ಮಾಯೆ—ಮೋಹಗಳ ವಶದಲ್ಲಿರುವುದು
ಜಗತ್ತು; ಯಮನು ಅದನ್ನು ಕಟ್ಟಿಹಾಕಿರುವನು; ಈ ಕಟ್ಟು ಬಿಚ್ಚುವುದು ನಾಮ ಸ್ಮರಣೆಮಾಡುವುದ
ರಿಂದ. ಗುರುವೇ ಸುಖದಾತನು, ಬೇರೆ ಯಾರನ್ನೂ ಹುಡುಕಬೇಡಿರಿ; ಇಹಲೋಕದಲ್ಲಿ ಹಾಗೂ
ಪರಲೋಕದಲ್ಲಿ ಅವನೇ ನಿಮ್ಮ ಜೊತೆಗೆ ಬರುವವನು. ಶಬ್ದದಿಂದ ಅಹಂಕಾರವನ್ನು ನಷ್ಟಗೊಳಿಸಿ,
ಒಬ್ಬನಲ್ಲಿ ಮನವನ್ನು ತೊಡಗಿಸಿರಿ; ಮನಸ್ಸು ಅಚಲವಾದಾಗ ಎಲ್ಲ ಭ್ರಮೆಗಳೂ ದೂರಾಗುವವು. ಮನ
ದಲ್ಲಿ ನಾಮವು ನೆಲಸಿದರೆ ಜೀವನಮುಕ್ತಿ ದೊರೆಯುವುದು; ಗುರುಮುಖನಿದ್ದರೆ ಅವನಲ್ಲಿ ಸತ್ಯವು
ತುಂಬಿರುವುದು. ಈ ಧರಿತ್ರಿಯನ್ನು ಸೃಜಿಸಿದವನು, ಗಗನವನ್ನು ಮಾಡಿದವನು, ಯಾವನು ಸೃಷ್ಟಿಯನ್ನು
ರಚಿಸಿದನೋ, ರಚಿಸಿ ನಾಶಮಾಡುವನೊ, ಯಾವನು ಸರ್ವ ನಿರಂತರ ಸ್ವಯಂಭೂ ಆಗಿರುವನೊ ಅವನು
ಯಾರನ್ನೂ ವಿಚಾರಿಸದೇ, ಕೇಳದೇ ನಮ್ಮನ್ನು ಕ್ಷಮಿಸುವನು.

(೪೧೨)

(೪೧)

ಝೂಠೆ ಕಲು ನಾಹೀ ಪತಿ ನಾಲು ॥ ಕಬಹು ನ ಸೂಚಾ ಕಾಲಾ ಕಾಲು ॥
ಪಿಂಜರಿ ಪಂಖಿ ಬಂಧಿಆ ಕೋಇ ॥ ಛೇರೀ ಭರಮೈ ಮುಕತಿ ನ ಹೋಇ ॥
ತಉ ಛೂಟೆ ಜಾ ಖಸಮು ಛಡಾಏ ॥ ಗುರುಮತಿ ಮೇಲೆ ಭಗತಿ ದೃಡಾಏ ॥ ೭ ॥

**ಬಿಲಾವಲ ಥಿತೀ.**

(೪೨)

ಸಪತಮೀ ಸತು ಸಂತೋಖಿ ಸರೀರಿ ॥ ಸಾತ ಸಮುಂದ ಭರೆ ನಿರಮಲ ನೀರಿ ॥
ಮಜನು ಸೀಲು ಸಚು ರಿದೈ ವೀಚಾರಿ ॥ ಗುರುಕೈ ಸಬದಿ ಪಾವೈ ಸಭಿ ಪಾರಿ ॥
ಮನಿ ಸಾಚಾ ಮುಖಿ ಸಾಚಉ ಭಾಇ ॥ ಸಚು ನೀಸಾಣೈ ಠಾಕ ನ ಪಾಇ ॥ ೯ ॥

**ಬಿಲಾವಲ ಥಿತೀ.**

(೪೩)

ಜೋತಿ ಸಬಾಇಡೀಏ ತ್ರಿಭವಣ ಸಾರೆ ರಾಮ ॥ ಘಟಿ ಘಟಿ ರವಿ ರಹಿಆ ಅಲಖ ಅಪಾರೆ ರಾಮ ॥
ಅಲಖ ಅಪಾರ ಅಪಾರು ಸಾಚಾ ಆಪು ಮಾರಿ ಮಿಲಾಈಐ ॥
ಹಉಮೈ ಮಮತಾ ಲೋಭು ಜಾಲಹು ಸಬದಿ ಮೈಲು ಚುಕಾಈಐ ॥
ದರಿ ಜಾಇ ದರಸನು ಕರೀ ಭಾಣೈ ತಾರಿ ತಾರಣಹಾರಿಆ ॥
ಹರಿ ನಾಮು ಅಮೃತು ಚಾಖಿ ತೃಪತೀ ನಾನಕಾ ಉರಧಾರಿಆ ॥ ೪ ॥

**ಬಿಲಾವಲು ಛಂತ್ ದಖಣೀ.**

(೪೪)

ಸಭನೀ ಘಟೀ ಸಹು ವಸೈ ಸಹ ಬಿನುಘಟು ನ ಕೋಇ ॥
ನಾನಕ ತೆ ಸೋಹಾಗಣೀ ಜಿನ್ಹಾ ಗುರುಮುಖಿ ಪರಗಟು ಹೋಇ ॥ ೧೯ ॥

**ಸಲೋಕ ವಾರಾ ತೆ ವಧೀಕ.**

(೪೫)

ಅಖೀಂ ಪರಣೈ ಜೆ ಫಿರಾ ದೇಖಾ ಸಭು ಆಕಾರು ॥
ಪುಛಾ ಗಿಆನೀ ಪಂಡಿತಾ ಪುಛಾ ಬೇದ ಬೀಚಾರ ॥
ಪುಛಾ ದೇವಾ ಮಾಣಸಾ ಜೋಧ ಕರಹಿ ಅವತಾರ ॥
ಸಿಧ ಸಮಾಧಿ ಸಭಿ ಸುಣೀ ಜಾಇ ದೇಖಾಂ ದರಬಾರು ॥
ಅಗೈ ಸಚಾ ಸಚಿ ನಾಇ ನಿರಭಉ ಭೈ ವಿಣು ಸಾರು ॥
ಹೊರ ಕಚೀ ಮತೀ ಕಚು ಪಿಚು ಅಂಧಿಆ ಅಂಧು ಬೀಚಾರು ॥
ನಾನಕ ಕರಮೀ ಬಂದಗೀ ನದರಿ ಲಂಘಾಏ ಪಾರಿ ॥ ೨ ॥

**ವಾರ ಸಾರಂಗ ಸಲೋಕ ೨, ಪಉಡೀ ೧೧.**



 

(೪೧)

ಅಸತ್ಯವಂತನಿಗೆ ಪ್ರಭುವಿನ ನಾಮದಲ್ಲಿ ಆಸ್ಥೆಯಿರುವುದಿಲ್ಲ; ಕರಿ ಕಾಗೆ ಎಂದೂ ಶುಭ್ರವಾಗುವುದಿಲ್ಲ. ಒಂದು ಹಕ್ಕಿ ಪಂಜರದಲ್ಲಿ ಬಂಧಿತವಾಗಿರುವುದು; ಒಳಗೇ ಸತ್ತುತ್ತಿರುವುದು, ಮುಕ್ತವಾಗುವುದಿಲ್ಲ. ಸ್ವಾಮಿಯು ಬಿಡಿಸಿದಾಗಲೇ ಬಿಡುಗಡೆ ಹೊಂದುವದು; ಗುರುಮತಿಯೊಡನೆ ಮಿಳನವಾದರೆ ಭಕ್ತಿ ದೃಢವಾಗುವುದು.

(೮೩೯)

(೪೨)

ಸತ್ಯ ಸಂತೋಷಗಳ ಶರೀರವುಳ್ಳವನಾಗಿದ್ದರೆ, ಸಪ್ತ ಸಮುದ್ರಗಳು ನಿರ್ಮಲ ನೀರಿನಿಂದ ತುಂಬಿದ್ದರೆ, ಶೀಲವೇ ಸ್ನಾನವಾದರೆ, ಹೃದಯದಲ್ಲಿ ಸತ್ಯದ ಚಿಂತನವು ಸಾಗಿರುತಿದ್ದರೆ, ಗುರುವಿನ ಶಬ್ದದ ಮುಖಾಂತರ ಸರ್ವಜ್ಞಾನವನ್ನು ಪಡೆದುಕೊಂಡಿದ್ದರೆ, ಮನದಲ್ಲಿ ಸತ್ಯವಿದ್ದರೆ, ಮುಖದ ಮೇಲೆ ಸತ್ಯಭಾವವಿದ್ದರೆ, ಹಣೆಯ ಮೇಲೆ ಸತ್ಯದ ಮುದ್ರೆಯಿದ್ದರೆ (ನಿನ್ನ ಅಥವಾ ಅವರ) ದಾರಿಯಲ್ಲಿ ಯಾವನು ಅಡ್ಡಗಟ್ಟಬಲ್ಲನು?

(೮೩೯)

(೪೩)

ಅವನದೇ ಜ್ಯೋತಿ ತ್ರಿಭುವನದಲ್ಲಿ ಹಬ್ಬಿರುವುದು; ಆ ಅಗೋಚರ ಅಪಾರನು ಘಟಘಟದಲ್ಲಿ ವ್ಯಾಪಿಸಿರುವನು. ಅವನು ಅಗೋಚರ ಅಪಾರನು, ಅಪಾರಸತ್ಯನು; ಅಹಮ್ಮಿನ ನಾಶದಿಂದಲೇ ಅವನಲ್ಲಿ ಬೆರೆಯುವರು. ಅಹಂಕಾರ, ಮಮತೆ, ಲೋಭವನ್ನು ಸುಟ್ಟುಬಿಡಿರಿ; ಶಬ್ದದ ಮುಖಾಂತರ ಮಲವನ್ನು ದೂರ ಮಾಡಿರಿ. ಓ ತಾರಕನೆ, ನಿನ್ನ ಕೃಪೆಯಿಂದ ನನ್ನನ್ನು ಉದ್ಧಾರಮಾಡು; ನಿನ್ನ ಬಾಗಿಲಬಳಿ ಸಾರಿ ನಿನ್ನ ದರ್ಶನ ಪಡೆಯುವೆ. ನಾನಕನು ಅವನನ್ನು ಹೃದಯದಲ್ಲಿ ಧರಿಸಿದನು, ಹರಿನಾಮಾಮೃತ ರುಚಿನೋಡಿದನು, ಈಗ ಅವನ ಮನವು ತೃಪ್ತವಾಗಿರುವುದು.

(೮೪೩)

(೪೪)

ಸರ್ವಶರೀರಗಳಲ್ಲಿ ಪತಿಯು (ನಿರಂಕಾರನ) ನಿವಾಸವಿರುವುದು; ಪತಿಯನುಳಿದು ಶರೀರವಿಲ್ಲ. ಗುರುವಿನ ಉಪದೇಶದಿಂದ ಅವನ ಸಾಕ್ಷಾತ್ಕಾರವನ್ನು ಪಡೆದವಳೇ ಸೌಭಾಗ್ಯವತಿ ಎಂದು ನಾನಕನು ಹೇಳುತ್ತಾನೆ.

(೧೪೧೨)

(೪೫)

ಒಂದುವೇಳೆ ಕಣ್ಣುಗಳ ಆಧಾರದಿಂಡ ನಡೆದರೆ ನಾನು ಸಕಲ ಸೃಷ್ಟಿಯನ್ನು ನೋಡುವೆ. ಅವನ ವಿಳಾಸವನ್ನು ಜ್ಞಾನಿಗಳಿಂದ, ಪಂಡಿತರಿಂದ ಕೇಳಿಕೊಳ್ಳುವೆ, ವೇದದಿಂದ ಕೇಳಿಕೊಳ್ಳುವೆ, ದೇವತೆಗಳಿಂದ ಕೇಳಿಕೊಳ್ಳುವೆ, ಮತ್ತು ಯೋಧರನ್ನು ಅವತಾರವೆಂದು ತಿಳಿಯುವ ಮನುಜರಿಂದ ಕೇಳಿಕೊಳ್ಳುವೆ. ಸಿದ್ಧರಿಂದ ಸಮಾಧಿಯ ವಿಷಯವನ್ನು ಕೇಳಿ ಅರಿಯುವೆ; ಅವನ ದರಬಾರಕ್ಕೆ ಹೋಗಿ ನೋಡುವೆ. ಅಲ್ಲಿ ಅವನೇ ಸತ್ಯನು, ಸತ್ಯನಾಮವನ್ನು ಧರಿಸಿದವನು. ನಿರ್ಭಯನ ಹೆಸರನ್ನು ಜಪಿಸಿರಿ; ಭಯವನ್ನು ಗೆದ್ದವನೇ ಪರಮ ಶ್ರೇಷ್ಠನು. ಯಾರು ಸ್ವತಃ ಕುರುಡರಿರುವರೊ, ಕುರುಡುವಿಚಾರಗಳುಳ್ಳವರಾಗಿರುವರೋ ಅವರ ಉಪದೇಶಗಳು ಅಪಕ್ವವಾಗಿರುವುವು. ಸತ್ಕರ್ಮ, ಭಕ್ತಿ, ಅವನ ಕೃಪೆ ಇವೇ ಭವಸಾಗರದಿಂದ ಪಾರುಗಾಣಿಸುವವು ಎಂದು ನಾನಕನು ಹೇಳುತ್ತಾನೆ.

(೧೨೪೧–೪೨)

ಭಾಗ ಎರಡು

# ಜೀವನ ಕಾಲಕ್ಷ್ಯ

## ಜೀವನದ ಗುರಿ

ಜಿನೀ ನಾಮು ಧಿಆಇಆ ಗಏ ಮುಸಕತಿ ಘಾಲಿ ।
ನಾನಕ ತೇ ಮುಖ ಉಜಲೆ, ಕೇತೀ ಛುಟೀ ನಾಲಿ ॥[1]

ಜಪು, ಅಂತಿಮ ಸಲೋಕ.

1. ಯಾರು ಪರಮಾತ್ಮನಲ್ಲಿ ಮನವನ್ನು ನೆಟ್ಟಿರುವರೊ, ಯಾರು ಶ್ರಮಪೂರ್ವಕವಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸಿರುವರೊ ಅವರ ಮುಖವು ಉಜ್ವಲವಾಗಿರುವುದು. ಅವರಿಂದಾಗಿಯೆ ಅದೆಷ್ಟೋ ಜನರು ಬಂಧನಮುಕ್ತರಾದರು ಎಂದು ನಾನಕನು ಹೇಳುತ್ತಾನೆ.

(೮)

## ಸಮಸ್ತ ಮಾನವ ಜಾತಿ ಕೇಲಿಏ ಮುಕ್ತಿ ಕಾ ಮಾರ್ಗ ಏಕ ಹೀ ಹೈ

(೪೬)

ದರಸನ ಕೀ ಪಿಆಸ ಜಿಸು ನರ ಹೋಇ ॥ ಏಕತು ರಾಚೈ ಪರಹರಿ ದೋಇ ॥
ದೂರಿ ದರದು ಮಥಿ ಅಮೃತು ಖಾಇ ॥ ಗುರಮುಖಿ ಬೂಝೈ ಏಕ ಸಮಾಇ ॥ ೧ ॥
ತೇರೆ ದರಸನ ಕಉ ಕೇತೇ ಬಿಲಲಾಇ ॥
ಬಿರಲಾ ಕೋ ಚೀನಸಿ ಗುರ ಸಬದಿ ಮಿಲಾಯಿ ॥ ೧ ॥ ರಹಾಉ ॥
ಬೇದ ವಖಾಣಿ ಕಹಹಿ ಇಕು ಕಹೀಐ ॥ ಓಹು ಬೇಅಂತ ಅಂತು ಕਿਨਿ ಲಹೀಐ ॥
ಏಕೋ ಕರತಾ ಜಿನಿ ಜಗು ಕೀಆ ॥ ಬಾಝು ಕಲಾ ಧರಿ ಗಗನು ಧರೀಆ ॥ ೨ ॥
ಏಕೋ ಗಿಆನು ಧಿಆನು ಧುನਿ ಬಾಣੀ ॥ ಏਕੁ ನਿਰਾਲਮੁ ಅಕਥ ಕಹਾਣੀ ॥
ಏಕೋ ಸಬದು ಸಚਾ ನೀਸਾਣੁ ॥ ಪੂਰੇ ಗುರ ತೇ ಜਾਣੈ ಜਾਣੁ ॥ ೩ ॥
ಏಕೋ ಧರಮು ದೃಡೈ ಸಚು ಕೋಈ ॥ ಗುರಮತಿ ಪೂರਾ ಜੁਗਿ ಜੁਗಿ ಸೋಈ ॥
ಅನಹದಿ ರਾਤਾ ಏਕ ಅವತಾರ ॥ ಓಹು ಗುರਮುಖਿ ಪਾವೈ ಅಲಖ ಅಪਾਰ ॥ ೪ ॥
ಏಕೋ ತಖತು ಏಕೋ ಪಾತਿਸਾਹੁ ॥ ಸਰਬੀ ಥਾਈ ಬੇਪਰਵਾਹੁ ॥
ತਿਸ ಕਾ ಕੀਆ ತ੍ਰਿಭವಣ ಸਾਰੁ ॥ ಓਹ ಅਗਮੁ ಅਗੋਚਰੁ ಏਕੰਕਾਰੁ ॥ ೫ ॥
ಏಕਾ ಮੂਰਤਿ ಸਾਚਾ ನਾಉ ॥ ತਿਥੈ ನਿಬੜੈ ಸਾಚੁ ನਿਆಉ ॥
ಸಾಚੀ ಕರಣੀ ಪತਿ ಪರವಾಣು ॥ ಸಾಚਿ ದರਗਹ ಪಾವੈ ಮಾಣು ॥ ೬ ॥
ಏಕಾ ಭಗತਿ ಏಕੋ ಹೈ ಭಾಉ ॥ ಬਿਨੁ ಭੈ ಭਗਤੀ ಆವਉ ಜಾಉ ॥
ಗುರ ತೇ ಸಮਝਿ ರಹੈ ಮਿਹਮಾಣು ॥ ಹਰਿ ರਸਿ ರਾਤਾ ಜਨੁ ಪਰವಾਣು ॥ ೭ ॥
ಇತ ಉತ ದೇਖਉ ಸਹਜੇ ರਾਵਉ ॥ ತੁਝੁ ಬਿਨੁ ಠਾਕੁਰ ಕਿਸੈ ನ ಭਾਵਉ ॥
ನಾನಕ ಹಉಮੈ ಶਬਦਿ ಜਲਾਇಯಾ ॥ ಸਤਿਗੁਰਿ ಸಾಚಾ ದರਸੁ ದਿਖਾಇಆ ॥ ೮ ॥ ೩ ॥

**ಬಸಂತು ಅಸಟಪದೀಆ**

(೪೭)

ಬದಫೈಲೀ ಗೈಬಾನಾ ಖಸಮು ನ ಜಾಣಈ ॥ ಸೋ ಕಹೀಐ ದೇವಾನಾ ಆಪು ನ ಪਛಾಣಈ ॥
ಕಲಹਿ ಬುರೀ ಸಂಸಾರਿ ವಾದೇ ಖಪೀಯೆ ॥ ವਿಣು ನਾವੈ ಬೇಕਾਰਿ ಭರਮੇ ಪਚੀਐ ॥
ರಾಹ ದೋವੈ ಇಕು ಜಾಣੈ ಸೋಈ ನਿਰ੍ਝುಸੀ ॥ ಕੁಫರ ಗೋಆ ಕುಫರಾಣੈ ಪਇਆ ದਰ੍ਝುಸੀ ॥
ಸਭ ದುನੀਆ ಸುಬਹਾਨੁ ಸਚਿ ಸಮਾਈਐ ॥ ಸಿਰ੍ਝੈ ದਰਿ ದੀਵਾਨਿ ಆਪੁ ಗವਾਈਐ ॥ ೯ ॥

**ವಾರ ಮಾಝು ಪಉಡೀ ೯.**



 

## ಸಮಸ್ತ ಮಾನವ ಜಾತಿಗೋಸ್ಕರ ಮುಕ್ತಿಯ ಮಾರ್ಗವು ಒಂದೇ ಇದೆ.

(೪೬)

ಯಾವ ನರನಿಗೆ ಪ್ರಭುದರ್ಶನದ ತೃಷೆಯಾಗಿರುವುದೊ ಅವನು ದ್ವೈತವನ್ನಳಿದು ಒಬ್ಬ ದೇವನಲ್ಲಿ ಪ್ರೀತಿಯಿರಿಸಬೇಕು. ಮಂಥನಮಾಡಿ ಅಮೃತಪಾನ ಮಾಡಿದವನ ದುಃಖ ದುಮ್ಮಾನಗಳೆಲ್ಲವು ದೂರವಾಗುವುದು; ಗುರುವಿನಿಂದ ದೀಕ್ಷೆಪಡೆದವನು ಒಬ್ಬ ದೇವನಲ್ಲಿ ಬೆರೆತುಹೋಗುವನು. ಎಷ್ಟೋ ಜನರು ನಿನ್ನ ದರ್ಶನಕ್ಕಾಗಿ ಅಳಲುತ್ತಿರುವರು, ಆದರೆ ಗುರುವಿನ ಶಬ್ದದಿಂದಲೇ ಪ್ರಭುವಿನೊಡನೆ ಮಿಳನವಾಗುವುದೆಂಬುದನ್ನು ತಿಳಿದುಕೊಳ್ಳುವವರು ಅಪರೂಪ. ಅವನು ಒಬ್ಬನು, ಒಬ್ಬನ ಕೀರ್ತನೆಯನ್ನೆ ಮಾಡಿರಿ ಎಂದು ವೇದಗಳು ಹೇಳುತ್ತವೆ. ಅವನು ಅನಂತನು, ಅವನ ಅಂತವನ್ನು ನಾವು ಹೇಗೆ ಕಾಣಬಲ್ಲೆವು ? ಜಗವನ್ನು ರಚಿಸಿದ ಕರ್ತನು ಒಬ್ಬನೇ; ನಿರಾಧಾರ ಧರೆಯನ್ನೂ ಆಕಾಶವನ್ನೂ ನಿಲ್ಲಿಸಿರುವನು, ಜ್ಞಾನ, ಧ್ಯಾನ ಧ್ವನಿ, ವಾಣಿ ಒಬ್ಬನದೇ; ಆ ಒಬ್ಬನು ಅವಲಂಬನವಿಲ್ಲದವನು; ಅವನ ಕಥೆ ಅನಿರ್ವಚನೀಯ. ಪೂರ್ಣ ಗುರುವಿನಿಂದ ಜ್ಞೇಯನನ್ನು ಅರಿತುಕೊಳ್ಳಿರಿ; ಗುರುವಿನ ಶಬ್ದವೊಂದೇ ಅವನ ನಿಜವಾದ ಗುರುತು ಮಾಡಿಕೊಡುವುದು. ಎಲ್ಲರ ಧರ್ಮವೂ ಒಂದೇ—ಸತ್ಯವನ್ನು ದೃಢವಾಗಿ ಅವಲಂಬಿಸಿರಿ; ಈ ಗುರುಮತಿಯನ್ನು ಪಡೆದವನು ಯುಗಯುಗದಲ್ಲಿ ಪೂರ್ಣತೆಯನ್ನು ಪಡೆದು ಅವನೊಬ್ಬನೇ ಇರುವನೆಂಬುದನ್ನು ಅರಿಯುವನು. ಯಾವನು ಅನಾಹತದಲ್ಲಿ ಲೀನನಾಗಿ ಅಚಲವಾಗಿ ಪ್ರೀತಿಯನ್ನಿಡುವನೊ ಆ ಗುರುಮುಖನೇ ಅಗೋಚರನನ್ನೂ ಅಪಾರನನ್ನೂ ಹೊಂದುವನು. ಒಂದೇ ಸಿಂಹಾಸನ, ಒಬ್ಬನೇ ಬಾದಶಾಹ; ಸರ್ವಸ್ಥಳಗಳಲ್ಲಿ ಅವನೊಬ್ಬನೇ ನಿಶ್ಚಿಂತನಾಗಿರುವವನು. ತ್ರಿಭುವನವನ್ನು ಅವನೇ ರಚಿಸಿರುವನು; ಅವನು ಅಗಮ್ಯನು, ಅಗೋಚರನು, ಒಂದು ಓಂಕಾರನು. ಅವನ ಮೂರ್ತಿಯೂ ಒಂದೇ, ಅವನಿಗೆ ಸತ್ಯನೆಂದು ಹೆಸರು. ಅವನೆದುರಿನಲ್ಲಿ ನ್ಯಾಯ ಪರಿಪೂರ್ಣವಾದ ಆಗುತ್ತದೆ. ನಿಜವಾದ ಕರ್ಮಗಳೂ ನಿಷ್ಠೆಯೂ ಅಲ್ಲಿ ಮಾನ್ಯವಾಗುತ್ತವೆ. ನಿಜವಾದ ದರಗಾದಲ್ಲಿ ಇದೇ ಮಾನ್ಯವಾದುದು. ಆ ಒಬ್ಬನಲ್ಲಿಯೇ ಭಕ್ತಿ, ಆ ಒಬ್ಬನೊಡನೆಯೆ ಪ್ರೇಮಭಾವ; ಭಯಭಕ್ತಿಯ ವಿನಾ ಆವಾಗಮನವು ನಿಲ್ಲುವುದಿಲ್ಲ. ಗುರುವಿನಿಂದ ಉಪದೇಶ ಪಡೆದು, ಅತಿಥಿಯಂತೆ ಇದ್ದು, ಹರಿಪ್ರೇಮರಸದಲ್ಲಿ ಮತ್ತನಾಗಿರುವವನು ಮಾತ್ರ ಅವನ ಸ್ವೀಕಾರಕ್ಕೆ ಯೋಗ್ಯನು. ಅತ್ತ ಇತ್ತ ಎಲ್ಲೆಲ್ಲೂ ನಿನ್ನನ್ನೇ ನೋಡಿ ಸಹಜವಾಗಿ ನಿನ್ನನ್ನು ಪಡೆಯುವೆ. ಹೇ ದೇವ, ನಿನ್ನ ಹೊರತು ತನಗೆ ಬೇರಾರ ಮೇಲೂ ಪ್ರೀತಿಯಿಲ್ಲ. ಶಬ್ದವು ಅಹಂಕಾರವನ್ನು ಭಸ್ಮಮಾಡಿತು, ಸದ್ಗುರು ಸತ್ಯಾಕಾರನದರ್ಶನ ಮಾಡಿಸಿರುವನು ಎಂದು ನಾನಕನು ಹೇಳುತ್ತಾನೆ.

(೧೧೮೮–೮೯)

(೪೬)

ಕದ್ದು—ಮುಚ್ಚಿ ಪಾಪಕರ್ಮ ಮಾಡುವವನಿಗೆ ಸ್ವಾಮಿಯ ಅರಿವು ಹೇಗಾದೀತು ? ತಮ್ಮನ್ನು ತಾವರಿಯದವರು ಹುಚ್ಚರು. ಪ್ರಪಂಚದಲ್ಲಿ ಕಲಹವು ಕೆಟ್ಟುದು, ನಾವು ವ್ಯರ್ಥವಾಗಿ ವಾದವಿವಾದದಲ್ಲಿ ಬಿದ್ದು ಸಾಯುತ್ತಿರುವೆವು; ಹರಿನಾಮ ಕೀರ್ತನೆಯನ್ನು ಮಾಡದೆ ವ್ಯರ್ಥವಾಗಿ ಭ್ರಮೆಯಲ್ಲಿ ತಿರುಗಾಡುವೆವು. ದಾರಿಗಳು ಎರಡು, ಒಂದನ್ನು ತಿಳಿದವನೇ ಯಶಸ್ವಿ; ನಾಸ್ತಿಕತೆಯ ಮಾತನಾಡುವವರು ನಾಸ್ತಿಕತೆಯ—ದುರಾಗ್ರಹದ ಬೆಂಕಿಯಲ್ಲಿ ಬಿದ್ದು ಸುಟ್ಟುಹೋಗುವರು. ಸತ್ಯಲೀನರಾದರೆ ಜಗತ್ತು ಸ್ತುತಿಸುವುದು; ಅಹಮ್ಮನು ಕಳೆದುಕೊಂಡರೆ ಪ್ರಭುವಿನ ಚರಣಗಳಲ್ಲಿ ತಾನಾಗಿಯೆ ಸಾಫಲ್ಯವು ದೊರೆಯುವುದು.

(೧೪೨)



 

(੪੮)

ಸೋ ಬ್ರಹಮಣು ಜೋ ಬಿಂದೈ ಬ್ರಹಮು ॥ ಜಪು ತಪು ಸಂಜಮು ಕಮಾವೈ ಕರಮು ॥
ಸೀಲ ಸಂತೋಖ ಕಾ ರಖೈ ಧರಮು ॥ ಬಂಧನ ತೋಡೈ ಹೋವೈ ಮುಕತು ॥
ಸೋಈ ಬ್ರಹಮಣು ಪೂಜಣ ಜುಗತ ॥ ੧੮ ॥

**ಸಲೋಕ ವಾರಾಂ ತೆ ವಧೀಕ.**

(੪੯)

ಖತ್ರಿ ಸೊ ಜು ಕರಮಾ ಕಾ ಸುರೂ ॥ ಪುಂನ ದಾನ ಕಾ ಕರೈ ಸರೀರೂ ॥
ಖೇತು ಪಛಾಣೈ ಬೀಜೈ ದಾನು ॥ ಸೊ ಖತ್ರೀ ದರಗಹ ಪರವಾಣು ॥
ಲಬು ಲೋಭು ಜೇ ಕೂಡ ಕಮಾವೈ ॥ ಅಪಣಾ ಕೀತಾ ಆಪೆ ಪಾವೈ ॥ ੧੯ ॥

**ಲೋಕ ವಾರಾ ತೆ ವಧಿಕ.**

(੫੦)

ಕಾಇಆ ಕಾಗದು ಮನು ಪರವಾಣಾ ॥ ಸಿರ ಕೇ ಲೇಖ ನ ಪಡೈ ಇಆಣಾ ॥
ದರಗಹ ಘಡೀಅಹಿ ತೀನೆ ಲೇಖ ॥ ಖೋಟಾ ಕಾಮಿ ನ ಅವೈ ವೇಖು ॥ ੧ ॥॥
ನಾನಕ ಜೆ ವಿಚಿ ರೂಪಾ ಹೋಇ ॥ ಖರಾ ಖರಾ ಆಖೈ ಸಭು ಕೋಇ ॥ ರಹಾಉ ॥
ಕಾದೀ ಕೂಡು ಬೋಲಿ ಮಲು ಖಾಇ ॥ ಬ್ರಾಹ್ಮಣು ನಾವೈ ಜೀ ಅ ಘಾಇ ॥
ಜೋಗೀ ಜುಗತಿ ನ ಜಾಣೈ ಅಂಧು ॥ ತೀನೆ ಓಜಾಡೆ ಕಾ ಬಂಧು ॥ ੨ ॥
ಸೋ ಜೋಗೀ ಜೋ ಜುಗತಿ ಪಛಾಣೈ ॥ ಗುರು ಪರಸಾದೀ ಏಕೋ ಜಾಣೈ ॥
ಕಾಜೀ ಸೋ ಜೋ ಉಲಟೀ ಕರೈ ॥ ಗುರ ಪರಸಾದಿ ಜೀವತು ಮರೈ ॥
ಸೋ ಬ್ರಾಹಮಣು ಜೋ ಬ್ರಹಮು ಬೀಚಾರೈ ॥ ಆಪಿ ತರೈ ಸಗಲೆ ಕುಲ ತಾರೈ ॥ ੩ ॥
ದಾನಸಬಂದು ಸೋಈ ದಿಲಿ ಧೋವೈ ॥ ಮುಸಲಮಾಣು ಸೋಈ ಮಲು ಖೋವೈ ॥
ಪಡಿಆ ಬೂಝೈ ಸೋ ಪರವಾಣು ॥ ಜಿಸು ಸಿರಿ ದರಗಹ ಕಾ ನೀಸಾಣು ॥ ੪ ॥ ੫ ॥ ੮ ॥

**ಧನಾಸರೀ.**

## ಸಭೀ ಮಾನವ ಸಮಾನ ಹೈಂ

(੫੧)

ಸಭು ಕೋ ಊಚಾ ಆಖೀಐ ನೀಚು ನ ದೀಸೈ ಕೋಇ ॥
ಇಕನೈ ಭಾಂಡೆ ಸಾಜಿಐ ಇಕು ಚಾನಣು ತಿಹು ಲೋಇ ॥
ಕರಮಿ ಮಿಲೈ ಸಚು ಪಾಈಐ ಧುರಿ ಬಖಸ ನ ಮೇಟೆ ಕೋಇ ॥ ੮ ॥

**ಸಿರೀ ರಾಗು, ಅಸಟಪದೀಆ.**



 

(೪೮)

ಬ್ರಹ್ಮಜ್ಞಾನಿಯಾಗಿರುವವವನೇ ಬ್ರಾಹ್ಮಣನು; ಜಪ, ತಪ, ಸಂಯಮ ಮತ್ತು ಇತರ ಕಾರ್ಯಗಳನ್ನು ಬ್ರಹ್ಮಜ್ಞಾನಕ್ಕಾಗಿಯೆ ಅವನು ಮಾಡುವನು. ಶೀಲ—ಸಂತೋಷವೇ ಅವನ ಧರ್ಮ; ಸಮಸ್ತ ಬಂಧನ ಗಳನ್ನು ಹರಿದೊಗೆದು ಮುಕ್ತನಾಗುವನು. ಇಂಥ ಬ್ರಾಹ್ಮಣನು ಪೂಜ್ಯನು.

(೧೪೧೧)

(೪೯)

ಕರ್ಮಶೂರನಾಗಿರುವವನೇ ಕ್ಷತ್ರಿಯನು. ಅವನು ಪುಣ್ಯ—ದಾನಗಳ ಸಾಕಾರ ಮೂರ್ತಿ. ಸುಪಾತ್ರನನ್ನು ಗುರುತಿಸಿ, ಅವನಿಗೆ ದಾನಮಾಡುವ ಕ್ಷತ್ರಿಯನು ಪ್ರಭುಚರಣಗಳಲ್ಲಿ ಸ್ವೀಕೃತನು, ಶ್ಲಾಘ್ಯನು. ಅತ್ಯಾಸೆ, ಲೋಭ ಹಾಗು ಅಸತ್ಯಗಳನ್ನು ಗಳಿಸುವವನು ತನ್ನ ಕರ್ಮಗಳಿಗೆ ಅನುಗುಣವಾಗಿ ಫಲವನ್ನು ಉಣ್ಣುವನು.

(೧೪೧೧)

(೫೦)

ಶಾರೀರಕ ಕ್ರಿಯೆ ಮನವೆಂಬ ಕಾಗದದ ಮೇಲೆ ಅನುಮತಿ ಪತ್ರವನ್ನು ಬರೆಯುವುದು. ಹಣೆಯ ಮೇಲೆ ಬರೆದ ಲೇಖವನ್ನು ಮೂರ್ಖನು ಓದಲಾರನು. ಈ ಲೇಖಗಳನ್ನು ಪ್ರಭುವಿನ ಚರಣಗಳ ಬಳಿ ಬರೆಯ ಲಾಗುವುದು; ಖೊಟ್ಟಿ ಮೊಹರು ನಿರುಪಯೋಗಿಯಾದುದು. ಮೋಹರಿನಲ್ಲಿ ಬೆಳ್ಳಿ ಕೂಡಿದ್ದರೆ ಎಲ್ಲರೂ ಅದು ಖರೆ ಖರೆ ಮೊಹರು ಎಂದು ಹೇಳುವರೆಂದು ನಾನಕನು ಹೇಳುತ್ತಾನೆ. ಕಾಜಿಯು ಸುಳ್ಳು ಹೇಳಿ ಮಲ ತಿನ್ನುವನು; ಬ್ರಾಹ್ಮಣನು ಜೀವಹತ್ಯೆ ಮಾಡಿ ಅನಂತರ ಸ್ನಾನಮಾಡುವನು. ಯೋಗಿ ಅಂಧನಾಗಿ ಯುಕ್ತಿಯನ್ನು ಅರಿಯನು. ಈ ಮೂವರೂ ನಾಶ ಮಾಡುವ ಬಂಧನಗಳ ಕಡೆಗೆ ಸಾಗುತ್ತಿರುವರು. ಯೋಗದ ರಹಸ್ಯವನ್ನು ಅರಿತವನೇ ಯೋಗಿ ಗುರುವಿನ ಕೃಪೆಯಿಂದ ಅವನು ಕೇವಲ ಒಬ್ಬನನ್ನೇ ಅರಿಯು ವನು. ಜಗತ್ತಿನಿಂದಾಚೆಗೆ ತನ್ನ ಬದ್ಧಿಯನ್ನು ದಾಟಿಸಿದವನೇ ಕಾಜಿ ಮತ್ತು ಗುರುಪ್ರಸಾದದಿಂದ ಜೀವಿತ ವಿದ್ದೂ ಅಹಂಕಾರವನ್ನು ನಾಶಮಾಡುವನು. ಬ್ರಹ್ಮನ ಬಗೆಗೆ ಚಿಂತನ ಮಾಡುವವನೇ ಬ್ರಾಹ್ಮಣನು; ಅವನು ಸ್ವತಃ ತನ್ನ ಉದ್ಧಾರ ಮಾಡಿಕೊಂಡು ಸಕಲರ ಉದ್ಧಾರಮಾಡುವನು. ತನ್ನ ಮನಸ್ಸನ್ನು ತೊಳೆದು ಕೊಂಡವನೇ ತತ್ತ್ವಜ್ಞಾನಿ, ಮಲವನ್ನು ದೂರಮಾಡುವವನೇ ಮುಸಲ್ಮಾನನು. ಓದಿದುದನ್ನು ಅರಿಯ ಬಲ್ಲವನೇ ಓದಿದವನೆಂದು ತಿಳಿಯಲಾಗುವುದು. ಅವನ ಹಣೆಯ ಮೇಲೆ ಪ್ರಭುವಿನ ಚರಣಗಳ ಮುದ್ರೆ ಅಂಕಿತವಾಗಿರುವುದು.

(೬೬೨)

## ಸರ್ವಮಾನವರು ಸಮಾನರು

(೫೧)

ಎಲ್ಲರೂ ಉಚ್ಚರೆಂದು ಹೇಳಿರಿ, ನೀಚನು ಎಲ್ಲಿಯೂ ಕಾಣಿಸುವುದಿಲ್ಲ. ಆ ಒಬ್ಬನೇ ಸರ್ವ ಪಾತ್ರಗಳನ್ನೂ ಉಂಟುಮಾಡಿದನು, ಮೂರು ಲೋಕಗಳಲ್ಲಿ ಒಂದೇ ಪ್ರಕಾಶವು ಪಸರಿಸಿರುವುದು. ಅವನ ಕೃಪೆಯಿಂದ ಸತ್ಯವು ದೊರೆಯುವುದು; ಈ ಮೂಲ ಕೃಪೆಯನ್ನು ಯಾರೂ ಅಳಿಸಲಾರರು.

(೬೨)

(೫೨)

ಫಕಡ ಜಾತೀ ಫಕಡು ನಾಉ ॥ ಸಭನಾ ಜೀಆ ಇಕಾ ಛಾಉ ॥
ಆಪಹು ಜೇ ಕೊ ಭಲಾ ಕಹಾಏ ॥ ನಾನಕ ತಾಪರು ಜಾಪೈ ಜಾ ಪತಿ ಲೇಖೈ ಪಾಏ ॥ ೧ ॥

**ವಾರ ಸಿರೀ ರಾಗು, ಸಲೋಕ ೯, ಪಉಡೀ ೩.**

(೫೩)

ಜಾತೀ ದೈ ಕಿಆ ಹಥಿ ಸಚು ಪರಖೀಐ ॥ ಮಹುರಾ ಹೋವೈ ಹಥಿ ಮರೀಐ ಚಖೀಐ ॥
ಸಚೇ ಕೀ ಸಿರಕಾರ ಜುಗು ಜುಗು ಜಾಣೀಐ ॥ ಹುಕುಮು ಮನೆ ಸಿರದಾರ ದರಿ ದೀಬಾಣೀಐ ॥
ಫುರಮಾನೀ ಹೈ ಕಾರ ಖಸಮಿ ಪಠಾಇಆ ॥ ತಬಲಬಾಜ ಬೀಚಾರ ಸಬದಿ ಸುಣಾಇಆ ॥
ಇಕಿ ಹೋಏ ಅಸವಾರ ಇಕನಾ ಸಾಖತೀ ॥ ಇಕನೀ ಬಧೇ ಭಾರ ಇಕನಾ ತಾಖತೀ ॥ ೧೦ ॥

**ವಾರ ಮಾರೂ ಪಉಡೀ ೧೦.**

## ಪರಮಾತ್ಮಾ ಸೆ ಮಿಲನ ಕಾ ಉಚಿತ ಮಾರ್ಗ

(೫೪)

ಮುಂದಾ ಸಂತೋಖು ಸರಮು ಪತು ಝೋಲೀ ಧಿಆನ ಕೀ ಕರಹಿ ಬಿಭೂತಿ ॥
ಖಿಂಥಾ ಕಾಲು ಕುಆರಿ ಕਾਇಆ ಜುಗತಿ ಡಂಡಾ ಪਰਤੀਤਿ ॥
ಆಈ ಪಂಥಿ ಸಗಲ ಜಮಾತೀ ಮನಿ ಜੀਤੈ ಜಗು ಜੀತು ॥
ಆದೇಸು ತಿಸೈ ಆದೇಸು ॥ ಆದಿ ಅನೀಲು ಅನಾದಿ ಅನಹತಿ ಜುಗು ಜುಗು ಏಕೋ ವੇਸು ॥ ೨೮ ॥

**ಜಪು ಪಉಡೀ ೨೮.**

(೫೫)

ಮರਣೈ ಕೀ ಚਿੰਤਾ ਨਹੀ ಜੀਵਣ ಕੀ ਨਹੀ ਆਸ ॥
ತೂ ਸਰਬ ಜೀਆ ਪ੍ਰਤਿਪਾਲਹੀ ಲੇਖੈ ਸਾਸ ਗਿਰਾਸ ॥
ಅಂತਰਿ ਗੁਰਮੁਖਿ ਤੂ ਬਸਹਿ ಜਿਉ ਭਾਵੈ ਤਿਉ ਨਿਰਜਾਸਿ ॥ ೧ ॥
ಜੀਅರੇ ರಾਮ ಜਪತ ಮನು ಮಾನು ॥
ಅಂತರಿ ಲಾಗੀ ಜਲਿ ಬੁਝੀ ಪਾਇಆ ಗುರਮੁಖਿ ಗਿಆਨੁ ॥ ೧ ॥ ರಹಾಉ ॥
ಅಂತರ ಕೀ ಗਤਿ ಜਾਣੀਐ ಗುರ ಮਿਲੀਐ ಸಂಕ ಉਤਾਰਿ ॥
ಮುಇಆ ಜਿਤੁ ಘਰਿ ಜਾಈಐ ತਿਤੁ ಜੀವਦಿಆ ಮರು ಮಾರਿ ॥
ಅನಹದ ಸಬದ ಸುಹಾವಣੇ ಪಾਈਐ ಗುರ ಬੀಚਾਰਿ ॥ ೨ ॥

(೫೨)

ಜಾತಿಹ ಅಭಿಮಾನವು ವ್ಯರ್ಥ, ಹೆಸರೂ ನಿರರ್ಥಕ; ಎಲ್ಲ ಪ್ರಾಣಿಗಳೂ ಒಂದೇ ಛಾಯೆಯ ಕೆಳಗೆ ಇರುವುದು. ತಾವು ಉತ್ತಮರೆಂದು ಹೇಳಿಕೊಳ್ಳುವರು, ಆದರೆ ಶ್ರೀಚರಣಗಳಲ್ಲಿ ಆದರ ಪಡೆದಾಗಲೇ ಅವರ ಉತ್ತಮತನವು ತಿಳಿಯುವದು.

(ಉ೩)

(೫೩)

ಜಾತಿವಾದದಲ್ಲಿ ಹುರುಳಿಲ್ಲ, ಅದರ ವಶದಲ್ಲಿ ಏನೂ ಇಲ್ಲ; ಸತ್ಯದ್ದೇ ಪರಿಕ್ಷೆಯಾಗುವುದು. ವಿಷಪಾನ ಮಾಡಿದವನು ಸಾಯಲೇಬೇಕಾಗುವದು. ನೈಜಪ್ರಭುವಿನ ಹುಕುಂ ಪ್ರತಿ ಯುಗದಲ್ಲಿಯೂ ನಡೆಯುವುದು; ಯಾರು ಹುಕುಮನ್ನು ಮನ್ನಿಸುವವರೊ ಅವರು ಆ ಸರದಾರ ಪ್ರಭುವಿನ ದರಬಾರವನ್ನು ಸೇರುವರು, ಈ ತನ್ನ ಅಪ್ಪಣೆಯನ್ನು ಸ್ವಾಮಿ ನಮಗೆ ಕಾರ್ಯಗತ ಮಾಡಲು ಕಳುಹಿಸಿರುವನು; ನಗಾರಿಯವನು ಶಬ್ದ ಕೇಳಿಸಿದನು, ವಿಚಾರವನ್ನು ಸೂಚಿಸಿದನು. ಕೆಲವರು ಸವಾರಿಮಾಡಿದರು, ಕೆಲವರು ಥೆಡಿ ಹಾಕತೊಡಗಿದರು, ಕೆಲವರು ಒಜ್ಜೆ ಹೊತ್ತುಕೊಂಡರು, ಇನ್ನು ಕೆಲವರು ಓಡತೊಡಗಿದರು.

(೧೪೨)

## ಪರಮಾತ್ಮನ ಸಾಕ್ಷಾತ್ಕಾರಕ್ಕೆ ಯೋಗ್ಯವಾದ ಮಾರ್ಗ

(೫೪)

ಸಂತೋಷದ ಮುದ್ರೆ ಹಚ್ಚಿಕೊಳ್ಳಿರಿ, ಶ್ರಮದ ಜೋಳಿಗೆ ಮತ್ತು ಕಪ್ಪುರ ಹಿಡಿಯಿರಿ, ಧ್ಯಾನದ ವಿಭೂತಿ ಹಚ್ಚಿಕೊಳ್ಳಿರಿ. ಕಾಯವು ಕಾಲಕುಮಾರಿಯೊಡನೆ ಸಂಬಂಧ ಜೋಡಿಸಿಕೊಂಡಿದೆ, ಈ ವಿಚಾರದ ದುಪಟೆಯನ್ನು ಹೊದ್ದುಕೊಳ್ಳಿರಿ. ಪರಮಾತ್ಮನ ಶ್ರದ್ಧೆಯ ದಂಡವನ್ನು ಧರಿಸಿರಿ. ಬಂದ ದಾರಿ ಇದು ಎಲ್ಲರೂ ಸಮಾನರೆಂದು ತಿಳಿಯಿರಿ. ಮನವನ್ನು ಗೆದ್ದವನು ಜಗತ್ತನ್ನು ಗೆಲ್ಲುವನು. ಆದಿಕಾಲಂದ ಇರುವ, ಎಣಿಸಲಾಗದ, ಆದಿಯಿಲ್ಲದ, ಶಾಶ್ವತನಾದ ಹಾಗೂ ಯುಗಯುಗದಲ್ಲೂ ಒಂದೇ ವೇಷದಲ್ಲಿರುವ ನಿರಂಕಾರನಿಗೆ ಅನಂತ ಪ್ರಣಾಮಗಳು.

(೬)

(೫೫)

ಸಾಯುವ ಚಿಂತೆಯಿಲ್ಲ, ಬದುಕುವ ಆಸೆ ಇಲ್ಲ. ನೀನು ಸರ್ವಜೀವಿಗಳ ಪ್ರತಿಪಾಲಕನು, ಉಸಿರಿನ ಮತ್ತು ತುತ್ತಿನ ಲೆಕ್ಕ ಇಡುವವನು ನೀನು. ಗುರುಮುಖಿನಲ್ಲಿ ನೀನೇ ವಾಸಿಸುವಿ. ನಿನ್ನ ಇಚ್ಛೆ ಏನೋ ಅದೇ ನಿರ್ಣಯ. ರಾಮನನ್ನು ಜಪಿಸುವುದರಿಂದಲೇ ಮನಕ್ಕೆ ತೃಪ್ತಿ. ಗುರುಮುಖಿನಿಂದ ಜ್ಞಾನದೊರೆಕಿದುದರಿಂದ ಒಳಗಿನ ಜ್ವಾಲೆ ಶಾಂತವಾಯಿತು. ಸಂಶಯ ರಹಿತನಾಗಿ ಗುರುವನ್ನು ಭೆಟ್ಟಿಯಾದಾಗ ಆಂತರಿಕ ಗತಿಯ ಜ್ಞಾನವಾಗುವುದು. ಸತ್ತ ಅನಂತರ ನೀನು ಯಮಗೃಹಕ್ಕೆ ಹೋಗುವುದಿದೆ; ಜೀವಂತವಿರುವಾಗಲೇ ಅಹಮ್ಮನ್ನು ನಾಶಿಗೊಳಿಸಿ, ಸತ್ತುಹೋಗು, ಆ ಯಮಗೃಹವನ್ನು ಅಳಿಸಿಬಿಡು. ಗುರುವಿನ ವಿಚಾರಗಳ ಮನನದಿಂದ ಆ ಇಂಪಾದ ಅನಾಹತ ಶಬ್ದ ಸಿದ್ಧಿಸುವುದು. ಅದು ದೊರೆತಾಗ ಅಹಮ್ ನಾಶವಾಗಿ ಹೋಗುವುದು. ತಮ್ಮ ಸದ್ಗುರುವಿನ ಸೇವೆಯಲ್ಲಿ ಮಗ್ನರಾಗಿರುವವರ ಮುಂದೆ ನಾನು ನನ್ನನ್ನು ನೂರು ನೂರು ಬಾರಿ ನಿವಾಳಿಸಿ ಚೆಲ್ಲುವೆ. ಯಾರ ಬಾಯಲ್ಲಿ ಹರಿನಾಮವಿರುವುದೊ ಅವರನ್ನು ಹರಿಚರಣಗಳ

ਅਨਹਦ ಬಾಣಿ ಪಾಈಐ ತಹ ಹಉಮೈ ಹೋಇ ಬಿನಾಸು ॥
ಸತಗುರು ಸೇವೆ ಆಪಣಾ ಹಉ ಸದ ಕುರಬಾಣೈ ತಾಸು ॥
ಖಡಿ ದರಗಹ ಪೈನಾಈಐ ಮುಖಿ ಹರಿನಾಮ ನಿವಾಸು ॥ ೩ ॥
ಜಹ ದೇಖಾ ತಹ ರವಿ ರಹೆ ಸಿವ ಸಕತೀ ಕಾ ಮೇಲು ॥
ತ್ರಿಹು ಗುಣ ಬಂಧೀ ದೇಹುರೀ ಜೋ ಆಇಆ ಜಗಿ ಸೋ ಖೇಲು ॥
ವಿಜೋಗೀ ದುಖಿ ವಿಛುಡೆ ಮನಮುಖಿ ಲಹಹಿನ ಮೇಲು ॥ ೪ ॥
ಮನು ಬೈರಾಗಿ ಘರಿ ಬಸೈ ಸಚ ಭೈ ರಾತಾ ಹೋಇ ॥
ಗಿಆನ ಮಹಾರಸು ಭೋಗವೈ ಬಾಹುಡಿ ಭೂಖ ನ ಹೋಇ ॥
ನಾನಕ ಇಹು ಮನು ಮಾರಿ ಮಿಲು ಭೀ ಫಿರಿ ದುಖು ನ ಹೋಇ ॥ ೫ ॥ ೮ ॥

**ಸಿರೀ ರಾಗು.**

(೫೭)

ಅಮಲು ಕರಿ ಧರತೀ ಬೀಜ ಸಬದೊ ಕರಿ ಸಚ ಕೀ ಆಬ ನಿತ ದೇಹಿ ಪಾಣೀ ॥
ಹೋಇ ಕರಿಸಾಣು ಈಮಾನು ಜಮಾಇ ಲೈ ಭಿಸತು ದೋಜಕು ಮೂಡೆ ಏವ ಜಾಣೀ ॥ ೧ ॥
ಮತು ಜಾಣ ಸಹಿ ಗಲೀ ಪಾಇಆ ॥
ಮಾಲ ಕೈ ಮಾಣೈ ರೂಪಕೀ ಸೋಭಾ ಇತು ಬಿಧೀ ಜನಮು ಗವಾಇಆ ॥ ರಹಾಉ ॥
ಐಬ ತನಿ ಚಿಕಡೊ ಇಹು ಮನು ಮೀಡಕೊ ಕಮಲ ಕೀ ಸಾರ ನಹೀ ಮೂಲಿ ಪಾಈ ॥
ಭಉರು ಉಸತಾದು ನಿತ ಭಾಖಿಆ ಬೋಲೆ ಕಿಉ ಬೂಝೈ ಜಾ ನಹ ಬುಝಾಈ ॥ ೨ ॥
ಆಖಣು ಸುನಣಾ ಪಉಣ ಕೀ ಬಾಣೀ ಇಹು ಮನು ರತಾ ಮಾಇಆ ॥
ಖಸಮ ಕೀ ನದರಿ ದಿಲಹಿ ಪಸಿಂದೆ ಜಿನೀ ಕರಿ ಏಕು ಧಿಆಇಆ ॥ ೩ ॥
ತೀಹ ಕರಿ ರಖೆ ಪಂಜಿ ಕರಿ ಸಾಥೀ ನಾಉ ಸೈತಾನು ಮತು ಕಟಿ ಜಾಈ ॥
ನಾನಕು ಆಖೈ ರಾಹಿ ಪೈ ಚಲಣಾ ಮಾಲು ಧನು ಕಿತಕೂ ಸಂಜಿಆಹೀ ॥ ೪ ॥ ೨೭ ॥

**ಸಿರೀ ರಾಗು.**

(೫೭)

ಏಕ ಸುರತಿ ಜೇತೆ ಹೈ ಜೀಅ ॥ ಸುರತಿ ವಿಹೂಣಾ ಕೋಇನ ಕೀಅ ॥
ಜೇಹೀ ಸುರತಿ ತೇಹಾ ತಿನ ರಾಹು ॥ ಲೇಖಾ ಇಕೋ ಆವಹು ಜಾಹು ॥ ೧ ॥
ಕಾಹೆ ಜೀಅ ಕರಹಿ ಚತುರಾಈ ॥ ಲೇವೈ ದೇವೈ ಢಿಲ ನ ಪಾಈ ॥ ೧ ॥ ರಹಾಉ ॥
ತೇರ ಜೀಅ ಜೀಆ ಕಾ ತೋಹಿ ॥ ಕಿತ ಕಉ ಸಾಹಿಬ ಆವಹಿ ರೋಹಿ ॥
ಜೇ ತು ಸಾಹಿಬ ಆವಹಿ ರೋಹಿ ॥ ತೂ ಓನಾ ಕಾ ತೇರೆ ಓಹಿ ॥ ೨ ॥

ಬಳಿ ಒಯ್ದು ಏರಿಸಲಾಗುವುದು. ನೋಡಿದ ಕಡೆಯಲ್ಲೆಲ್ಲ ಶಿವಶಕ್ತಿಯರ ಮಿಲನವು ಹಬ್ಬಿದುದು ಗೋಚರಿಸುವುದು. ತ್ರಿಗುಣದಿಂದ ಬಂಧಿತವಾಗಿ ಈ ದೇಹ ಜಗತ್ತಿಗೆ ಬಂದುದು ಕೇವಲ ಅವನ ಒಂದು ಆಟ. ಅವನಿಂದ ಅಗಲಿದ ಮನಮುಖರು ವಿಯೋಗದಿಂದ ದುಃಖಿಗಳಾಗಿರುವರು; ಮಿಲನ ಸುಖವು ಅವರಿಗೆ ಸಿಕ್ಕುವದೇ ಇಲ್ಲ. ಮನವು ವಿರಾಗಿಯಾಗಿ ತನ್ನಲ್ಲಿ ತಾನೆ ವಾಸವಾದರೆ, ಸತ್ಯ ಮತ್ತು ಭಯದಲ್ಲಿ ಲೀನವಾದರೆ ಅದು ಜ್ಞಾನದ ಮಹಾರಸವನ್ನು ಈಂಟುವದು, ಅನಂತರ ಅದಕ್ಕೆ ಯಾತರದೂ ಹಸಿವಾಗುವುದಿಲ್ಲ. ಈ ಮನವನ್ನು ನಿಗ್ರಹಿಸಿ ಪ್ರಭುವಿನೊಡನೆ ಬೆರೆತರೆ ನಿನಗೆಂದಿಗೂ ದುಃಖವಾಗುವುದಿಲ್ಲ ಎಂದು ನಾನಕನು ಹೇಳುತ್ತಾನೆ.

(೨೦–೨೧)

(೫೬)

ಕರ್ಮದ ಭೂಮಿಯಲ್ಲಿ ಶಬ್ದದ ಬೀಜವನ್ನು ಹಾಕಿ, ಸತ್ಯದ ನೀರಿನಿಂದ ದಿನವೂ ಸಿಂಚನಮಾಡಿರಿ. ಪ್ರಾಮಾಣಿಕ ಒಕ್ಕಲಿಗನಾಗಿ ಬೆಳೆದರೆ, ಮೂರ್ಖನೇ, ಆಗ ನಿನಗೆ ತಿಳಿದೀತು ಸ್ವರ್ಗ—ನರಕ ಅಂದರೆ ಏನೆಂಬುದು. ಕೇವಲ ಮಾತಿನಿಂದಲೇ ಅದನ್ನು ಪಡೆಯುವಿಯೆಂದು ತಿಳಿಯಬೇಡ; ಧನದ ಬಗ್ಗೆ ಗರ್ವ ತಳೆಯುತ್ತ ರೂಪದ ಶೋಭೆಯನ್ನು ಪ್ರಶಂಸಿಸುತ್ತ ಜನ್ಮವನ್ನು ಕಳೆದ, ಶರೀರದಲ್ಲಿರುವ ಅವಗುಣವೆಂಬ ಕೆಸರಿನಲ್ಲಿ ಇರುವುದು ಮನವೆಂಬ ಕಪ್ಪೆ; ಕೆಸರಿನಲ್ಲಿ ಕಮಲವೂ ಇರುವುದು, ಆದರೆ ಕಪ್ಪೆಗೆ ಅದರ ಅರಿವು ಇಲ್ಲ. ಗುರುವೆಂಬ ಭ್ರಮರವು ನಿನಗೆ ಆ ಕಮಲಪುಷ್ಪದ ಜ್ಞಾನಮಾಡಿಕೊಡದಿದ್ದರೆ ನಿನಗೆ ಹೇಗೆ ತಿಳಿದೀತು? ಈ ಮನಸ್ಸೋ ಮಾಯೆಯಲ್ಲಿ ಸಿಲುಕಿರುವುದು. ಹೇಳುವುದು—ಕೇಳುವುದು, ಬರೀ ಗಾಳಿಯ ಮಾತು. ಒಬ್ಬ ಪ್ರಭುವಿನಧ್ಯಾನ ಮಾಡುವವರ ಮೇಲೆ ಸ್ವಾಮಿಯ ಕೃಪೆಯಾಗುವುದು, ಅವರು ಸ್ವಾಮಿಯ ಪ್ರೀತಿಗೆ ಪಾತ್ರರು. ಮೂವತ್ತು ಉಪವಾಸ ಮತ್ತು ಐದು ನಮಾಜು ಬಿಡದೆ ಜೊತೆಯಲ್ಲಿ ಇಟ್ಟುಕೊಂಡಿರು, ಹುಷಾರಿ, ಸೈತಾನನೇ, ಇವನ್ನು ನಿಷ್ಫಲಗೊಳಿಸಬೇಡ. ನೀನು ಮಾರ್ಗದಲ್ಲಿ ನಡೆಯಬೇಕಾಗಿದೆ, ಈ ಧನ—ಧಾನ್ಯ ಏಕೆ ಸಂಗ್ರಹಿಸುವಿ? ಎಂದು ನಾನಕನು ಹೇಳುತ್ತಾನೆ.

(೨೩–೨೪)

(೫೭)

ಎಷ್ಟು ಜೀವಿಗಳಿವೆಯೋ ಅಷ್ಟರಲ್ಲಿಯೂ ಒಂದು ಸುರತಿ ಎಂದರೆ ಅರಿವು ಇರುವುದು. ಸುರತಿಯಿಲ್ಲದ ಯಾವುದಕ್ಕೂ ಜನ್ಮ ಕೊಟ್ಟಿಲ್ಲ. ಸುರತಿ ಹೇಗೋ ಹಾಗೆ ಮಾರ್ಗ; ಒಂದೇ ಫಲ—ಆವಾಗಮನ. ಜೀವವೇ ಅದೇಕೆ ಜಾಣತನ ತೋರಿಸುತ್ತಿ? ಅವನು ಕೊಡುಕೊಳ್ಳುವುದರಲ್ಲಿ ತಡವಿಲ್ಲ. ಸಮಸ್ತ ಜೀವಗಳು ನಿನ್ನವು, ನೀನು ಜೀವಗಳ ಒಡೆಯನು, ಕರ್ತಾರನು; ಇವುಗಳ ಮೇಲೆ ಸ್ವಾಮೀ, ನಿನ್ನ ಕ್ರೋಧವೆಂಥದು? ಹೇ ಸ್ವಾಮಿ, ಅವರ ಮೇಲೆ ನೀನು ಸಿಟ್ಟಾಗಿದ್ದರೂ ನೀನು ಅವರವನು, ಅವರು ನಿನ್ನವರು. ನಾವು ಕೆಲಸ ಕೆಡುವಂಥ ಮಾತನ್ನೂ ಆಡುವೆವು; ಆದರೆ ನೀನು ನಿನ್ನ ಕೃಪಾದೃಷ್ಟಿಯಿಂದ ನಮ್ಮ ಮಾತನ್ನು ಪರೀಕ್ಷಿಸುವೆ.

ಅಸಿ ಬೋಲಬಿಗಾಡ ವಿಗಾಡಹ ಬೋಲ ॥ ತೂ ನದರೀ ಅಂದರಿ ತೋಲಹಿ ತೋಲ ॥
ಜಹ ಕರಣೀ ತಹ ಪೂರೀ ಮತಿ ॥ ಕರಣೀ ಬಾಝಹು ಘಟೆ ಘಟಿ ॥ ೩ ॥
ಪ್ರಣವತಿ ನಾನಕು ಗಿಆನೀ ಕೈಸಾ ಹೋಇ ॥ ಆಪು ಪಛಾಣೈ ಬೂಝೈ ಸೋಇ ॥
ಗುರ ಪರಸಾದಿ ಕರೈ ಬೀಚಾರು ॥ ಸೋ ಗಿಆನೀ ದರಗಹ ಪರವಾಣು ॥ ೪ ॥ ೩೦ ॥

ಸಿರೀ ರಾಗು.

(೫೮)

ಅಛಲ ಛಲಾಈ ನಹ ಛಲೈ ಘಾಉ ಕಟಾರಾ ಕರಿ ಸಕೈ ॥
ಜಿಉ ಸಾಹಿಬು ರಾಖೈ ತಿಉ ರಹೈ ಇಸು ಲೋಭೀಕಾ ಜೀಉ ಟಲಪಲೆ ॥ ೧ ॥
ಬಿನು ತೇಲ ದೀವಾ ಕಿಉ ಜಲೈ ॥ ೧ ॥ ರಹಾಉ ॥
ಪೋಥಿ ಪುರಾಣ ಕಮಾಈಐ ॥ ಭಉ ವಟೀ ಇತು ತನಿ ಪಾಈಐ ॥
ಸಚು ಬೂಝಣು ಆಣಿ ಜಲಾಈಐ ॥ ೨ ॥
ಇಹು ತೇಲು ದೀವಾ ಇಉ ಜಲೈ ॥ ಕರಿ ಚಾನಣು ಸಾಹಿಬು ತಉ ಮಿಲೈ ॥ ೧ ॥ ರಹಾಉ ॥
ಇತು ತನಿ ಲಾಗೈ ಬಾಣೀಆ ॥ ಸುಖು ಹೋವೆ ಸೇವ ಕಮಾಣೀಆ ॥
ಸಭ ದುನೀಆ ಆವಣ ಜಾಣೀಆ ॥ ೩ ॥
ವಿಚಿ ದುನೀಆ ಸೇವ ಕಮಾಈಐ ॥ ತಾ ದರಗಹ ವೈಸಣು ಪಾಈಐ ॥
ಕಹು ನಾನಕ ಬಾಹ ಲುಡಾಈಐ ॥ ೪ ॥ ೩೩ ॥

ಸಿರೀ ರಾಗು.

(೫೯)

ರಾಮು ನಾಮಿ ಮನು ಬೇಧಿಆ ಅವರು ಕಿ ಕರಿ ವೀಚಾರು ॥
ಸಬದ ಸುರತಿ ಸುಖು ಊಪಜೈ ಪ್ರಭು ರಾತಉ ಸುಖ ಸಾರು ॥
ಜಿಉ ಭಾವೈ ತಿಉ ರಾಖು ತೂ ಮೈ ಹರಿನಾಮು ಆಧಾರು ॥ ೧ ॥
ಮನ ರೇ ಸಾಚಿ ಖಸಮ ರಜಾಇ ॥
ಜಿನಿ ತನು ಮನು ಸಾಜಿ ಸೀಗಾರಿಆ ತಿಸು ಸೇತೀ ಲಿವ ಲಾಇ ॥ ರಹಾಉ ॥
ತನು ಬೈಸಂತರಿ ಹೋಮೀಐ ಇಕ ರತೀ ತೋಲಿ ಕಟಾಇ ॥
ತನು ಮನು ಸಮಧಾ ಜೇ ಕರೀ ಅನದಿನು ಅಗನಿ ಜಲಾಇ ॥
ಹರಿನಾಮೈ ತುಲಿ ನ ಪುಜಈ ಜೇ ಲಖ ಕೋಟೀ ಕರಮ ಕಮಾಇ ॥ ೨ ॥
ಅರಧ ಸರೀರು ಕಟಾಈಐ ಸಿರಿ ಕರವತು ಧರಾಇ ॥
ತನು ಹೈಮಂಚಲಿ ಗಾಲೀಐ ಭೀ ಮನ ತೇ ರೋಗು ನ ಜಾಇ ॥
ಹರಿನಾಮೈ ತುಲಿ ನ ಪುಜಈ ಸಭ ಡಿಠೀ ಠೋಕಿ ವಜಾಇ ॥ ೩ ॥

ಶುದ್ಧ ಆಚರಣೆ ಇದ್ದಲ್ಲಿ ಪೂರ್ಣ ಬುದ್ಧಿ ಇರುವುದು; ಶುದ್ಧಾಚರಣೆ ಇಲ್ಲದಿದ್ದರೆ ಬುದ್ಧಿ ಅಪೂರ್ಣ, ಪೂರ್ತಿ ಅಪೂರ್ಣ. ಜ್ಞಾನಿ ಹೇಗಿರಬೇಕೆಂಬುದನ್ನು ಕುರಿತು ನಾನಕನು ಹೇಳುತ್ತಾನೆ—ತನ್ನನ್ನು ತಾನು ಅರಿತವನೇ ಪ್ರಭುವನ್ನು ಅರಿಯುವನು; ಗುರುಪ್ರಸಾದದಿಂದ ಸದಾ ಒಳ್ಳೆಯದನ್ನು ಮನನಮಾಡುವವನು ಜ್ಞಾನಿ, ಅವನು ಪ್ರಭುವಿನ ಚರಣಗಳಿಗೆ ಸ್ವೀಕೃತನು.

(೨೪–೨೫)

(೫೮)

ಮಾಯೆ ಅಛಲ, ಅದಕ್ಕೆ ಯಾರು ಮೋಸಮಾಡಬಲ್ಲರು ? ಮಾಯೆಯನ್ನು ಕಟಾರಿಯಿಂದ ಇರಿಯಲು ಸಾಧ್ಯವೇ ? ಸ್ವಾಮಿ ಇಟ್ಟಹಾಗೆ ಇರಬೇಕು. ಲೋಭಿಯ ಮನವು ಸದಾ ತಳಮಳಿಸುತ್ತಿರುವುದು. ಎಣ್ಣೆಯಿಲ್ಲದೆ ದೀಪವು ಹೇಗೆ ಉರಿಯಬಲ್ಲದು ? ಪುರಾಣಗಳು ಮುಂತಾದ ಧರ್ಮಗ್ರಂಥಗಳು ಹೇಳುವಂತೆ ಆಚರಣೆ ಮಾಡಬೇಕು; ಪ್ರಭುವಿನ ಭಯವೆಂಬ ದೀಪವನ್ನು ತಮ್ಮ ಶರೀರದಲ್ಲಿ ಹೊತ್ತಿಸಿಕೊಳ್ಳಬೇಕು. ಸತ್ಯಜ್ಞಾನದಿಂದ ತಮ್ಮ ದೀಪವನ್ನು ಉರಿಸಬೇಕು. ಈ ತೈಲದೀಪವು ಹೀಗೆ ಉರಿಯುವುದು. ಪ್ರಕಾಶವುಂಟಾದಾಗ ಸ್ವಾಮಿ ಕಾಣುವನು, ದೊರೆಯುವನು. ಈ ಶರೀರಕ್ಕೆ ಬಾಣಗಳು ತಗಲುವುವು; ಆದರೆ ಸೇವೆಯಿಂದ ಸುಖವು ಸಿಗುವುದು. ಈ ಪ್ರಪಂಚವೆಲ್ಲವೂ ಬರುವುದು, ಹೋಗುವುದು; ಪ್ರಪಂಚದಲ್ಲಿದ್ದು ಸೇವೆಮಾಡುವುದರಿಂದ ಪ್ರಭುವಿನ ಚರಣಗಳಲ್ಲಿ ನೆಲಸುವಿರಿ. ನೀವು ಭುಜಗಳನ್ನು ಹೊಯ್ದಾಡಿಸುತ್ತ ಪ್ರಸನ್ನ ಮುದ್ರೆಯಿಂದ ಪ್ರಭುವಿನ ಹತ್ತಿರ ಹೋಗಬಲ್ಲಿರಿ ಎಂದು ನಾನಕನು ಹೇಳುತ್ತಾನೆ.

(೨೫–೨೬)

(೫೯)

ರಾಮನಾಮವು ನನ್ನ ಮನಸ್ಸನ್ನು ಭೇದಿಸಿರುವುದು, ಮತ್ತೇನು ವಿಚಾರಮಾಡಲಿ ? ಗುರುವಿನ ಶಬ್ದಗಳಲ್ಲಿ ಧ್ಯಾನವಿರಿಸಿದರೆ ಸುಖವು ಸಿಗುವುದು; ಪ್ರಭುವಿನ ಮೇಲೆ ಪ್ರೇಮವಿಡುವುದರಿಂದ ಉತ್ತಮ ಸುಖ ದೊರೆಯುವುದು. ನಿನಗೆ ಸರಿಕಂಡ ಹಾಗೆ ಇಡು ನನ್ನನ್ನು; ನನಗೊಂದೇ ಆಧಾರ ಪ್ರಭುವಿನ ನಾಮ. ಓ ಮನವೇ, ಸ್ವಾಮಿಯ ಇಚ್ಛೆಯೇ ಸತ್ಯ. ಯಾವನು ತನು—ಮನಗಳನ್ನು ಸೃಜಿಸಿದನೋ ಸಿಂಗರಿಸಿದನೋ ಅವನ ಮೇಲೆ ಪ್ರೇಮವಿರಿಸು. ತನುವನ್ನು ಚೂರುಚೂರಾಗಿ ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡು; ತನುಮನಗಳನ್ನು ಸಮಿಧೆಮಾಡಿ ಪ್ರತಿದಿನ ಅಗ್ನಿಯಲ್ಲಿ ಆಹುತಿಕೊಡು. ಇಂಥ ಲಕ್ಷಾಂತರ ಕರ್ಮಗಳನ್ನು ಮಾಡಿದರೂ ಅವು ಹರಿನಾಮಕ್ಕೆ ಸಮನಾಗಲಾರವು. ತಲೆಯ ಮೇಲೆ ಗರಗಸ ಹಿಡಿದು ಈ ಶರೀರವನ್ನು ಎರಡು ಹೋಳುಮಾಡಿದರೂ ಹಿಮಾಚಲದಲ್ಲಿ ಕರಗಿಸಿದರೂ ಮನದಿಂದ (ಅಹಮ್ಮಿನ) ರೋಗವು ಹೋಗುವುದಿಲ್ಲ. ನಾನು ಎಲ್ಲ ಪ್ರಯತ್ನಗಳನ್ನೂ ಮಾಡಿ ನೋಡಿದೆ: ಈ ಎಲ್ಲ ಕರ್ಮಗಳು ಹರಿನಾಮಕ್ಕೆ ಸರಿಸಮವಲ್ಲವೆಂಬುದು ತೋರಿತು. ಕಾಂಚನದ ದುರ್ಗಗಳನ್ನೂ ಶ್ರೇಷ್ಠ ಕುದುರೆಗಳನ್ನೂ ಆನೆಗಳನ್ನೂ ದಾನಮಾಡಿದರೂ, ಭೂಮಿದಾನ, ಗೋದಾನ ಮಾಡಿದರೂ ಮನಸ್ಸಿನಿಂದ ಅಹಂಕಾರ ತೊಲಗದು. ರಾಮನಾಮವು ಮನವನ್ನು

ಕಂಚನಕೇ ಕೋಟ ದತು ಕರೀ ಬಹು ಹೈವರ ಗೈವರ ದಾನು ॥
ಭೂಮಿ ದಾನು ಗಊಆ ಘಣ ಭೀ ಅಂತರಿ ಗರಬು ಗುಮಾನು ॥
ರಾಮು ನಾಮಿ ಮನು ಬೇಧಿಆ ಗುರಿ ದೀಆ ಸಚು ದಾನು ॥ ೪ ॥
ಮನ ಹಠ ಬುಧೀ ಕೇತೀಆ ಕೇತೇ ಬೇದ ಬೀಚಾರ ॥
ಕೇತೇ ಬಂಧನ ಜೀ ಅಕೇ ಗುರಮುಖಿ ಮೋಖದುಆರು ॥
ಸಚಹು ಓರೈ ಸಭು ಕೋ ಉಪರಿ ಸಚು ಆಚಾರು ॥ ೫ ॥
ಸಭು ಕೋ ಊಚಾ ಆಖೀಐ ನೀಚು ನ ದೀಸೈ ಕೋಇ ॥
ಇಕನೈ ಭಾಡೆ ಸಾಜಿಐ ಇಕುಚಾನಣು ತಿಹು ಲೋಇ ॥
ಕರಮಿ ಮಿಲೈ ಸಚು ಪಾಈಐ ಧುರಿ ಬಖಸ ನ ಮೇಟೆ ಕೋಇ ॥ ೬ ॥
ಸಾಧು ಮಿಲೈ ಸಾಧು ಜನೈ ಸಂತೋಖು ವಸೆ ಗುರ ಭಾಇ ॥
ಅಕಥ ಕಥಾ ವೀಚಾರೀಐ ಜೇ ಸತಿಗುರ ಮಾಹಿ ಸಮಾಇ ॥
ಪೀ ಅಮೃತು ಸಂತೋಖಿಆ ದರಗಹಿ ಪೈಧಾ ಜಾಇ ॥ ೭ ॥
ಘಟಿ ಘಟಿ ವಾಜೈ ಕಿಂಗುರಿ ಅನದಿನು ಸಬದಿ ಸುಭಾಇ ॥
ವಿರಲೆ ಕಉ ಸೋಝೀ ಪಈ ಗುರಮುಖಿ ಮನು ಸಮಝಾಇ ॥
ನಾನಕ ನಾಮು ನ ವೀಸರೈ ಛೂಟೈ ಸಬದು ಕಮಾಇ ॥ ೮ ॥ ೧೪ ॥

ಸಿರೀ ರಾಗು ಅಸಟಪದಿಆ.

(೬೦)

ಮಿಹರ ಮಸೀತಿ ಸಿದಕು ಮುಸಲಾ ಹಕು ಹಲಾಲು ಕುರಾಣು ॥
ಕರಣೀ ಕಾಬಾ ಸಚು ಪೀರು ಕಲಮಾ ಕರಮು ನಿವಾಜ ॥
ಸರಮು ಸುನತಿ ಸೀಲು ರೋಜಾ ಹೋಹು ಮುಸಲಮಾಣು ॥
ತಸಬೀ ಸಾತಿ ಸುಬಾವಸೀ ನಾನಕ ರಖೈ ಲಾಜ ॥ ೧ ॥
ಹಕು ಪರಾಇಆ ನಾನಕಾ ಉಸು ಸೂಅರ ಉಸು ಗಾಇ ॥
ಗುರು ಪೀರು ಹಾಮಾ ತಾ ಭರೆ ಜಾ ಮುರದಾರು ನ ಖಾಇ ॥
ಗಲೀ ಭಿಸತಿ ನ ಜಾಈಐ ಛುಟೈ ಸಚು ಕಮಾಇ ॥
ಮಾರಣ ಪಾಹಿ ಹರಾಮ ಮಹಿ ಹೋಇ ಹಲಾಲು ನ ಜಾಇ ॥
ನಾನಕ ಗಲೀ ಕೂಡೀಈ ಕೂಡೋ ಪಲೈ ಪಾಇ ॥ ೨ ॥
ಪಂಜಿ ನಿವಾಜಾ ವಖತ ಪಂಜ ಪಂಜಾ ಪಂಜೇ ನಾಉ ॥
ಪಹಿಲಾ ಸಚು ಹಲಾಲ ದುಇ ತೀಜಾ ಖೈರ ಖುದಾಇ ॥
ಚಉಥಿ ನೀ ಅತಿ ರಾಸಿ ಮನು ಪಂಜವೀ ಸಿಫತಿ ಸನಾಇ ॥
ಕರಣೀ ಕಲಮಾ ಆಖಿ ಕೈ ತಾ ಮುಸಲಮಾಣು ಸದಾಇ ॥
ನಾನಕ ಜೇತೆ ಕೂಡಿಆರ ಕೂಡೈ ಕೂಡಿ ಪಾಇ ॥ ೩ ॥

ವಾರ ಮಾಝು, ಮಹಲಾ ೧ ಸಲೋಕ ೧, ೨, ೩.

ಭೇದಿಸಿರುವದು; ಈ ನಿಜವಾದ ದಾನ ನನಗೆ ಗುರುವಿನಿಂದ ಲಭಿಸಿದೆ. ಮನದ ಹಟದಿಂದಾಗಿರುವ ಬುದ್ಧಿಯ ಯುಕ್ತಿಸಾಧನಗಳನ್ನು ಕಡಿಮೆಮಾಡಬೇಕಾಗಿರುವುದು. ವೇದಭಾಷ್ಯಗಳೂ ಅದೇಷ್ಟೋ ಇರುವುವು. ಆತ್ಮದ ಬಂಧನಗಳೂ ಅದೆಷ್ಟೋ ಇರುವವು. ಗುರುವಿನ ಮುಖಾಂತರವೇ ಮುಕ್ತಿಯ ದ್ವಾರವು ದೊರೆಯುವುದು. ಸತ್ಯವು ಎಲ್ಲಕ್ಕಿಂತ ಉಚ್ಚವಾದುದು, ಸತ್ಯಾಚಾರವು ಉಚ್ಚತರವಾದುದು. ಎಲ್ಲರೂ ಉಚ್ಚರು ಎಂದು ಹೇಳಿರಿ. ಎಲ್ಲಿಯೂ ನೀಚನು ಕಾಣುವುದಿಲ್ಲ. ಅವನೇ ಎಲ್ಲ ಪಾತ್ರಗಳನ್ನೂ ಸೃಷ್ಟಿಸಿದನು; ಮೂರು ಲೋಕಗಳಲ್ಲೂ ಒಂದೇ ಪ್ರಸರಿಸಿರುವುದು. ಅವನ ಕೃಪೆಯಿಂದಲೇ ಸತ್ಯದ ಪ್ರಾಪ್ತಿ. ಈಮೂಲ ಕೃಪೆಯನ್ನು ಯಾರೂ ನಾಶಗೊಳಿಸಲಾರರು. ಸಾಧುವು ಸಾಧು ಜನರಿಂದ ದೊರಕುವನು, ಗುರುಪ್ರೇಮದಿಂದ ಮನಕ್ಕೆ ಸಂತೋಷವು ಸಿಗುವುದು. ಸದ್ಗುರುವಿನಲ್ಲಿ ಮನವು ಲೀನವಾದರೆ ಅವನ ಅಕಥನೀಯ ಕಥೆಯನ್ನು ಕುರಿತು ವಿಚಾರಮಾಡುವುದು ಸಾಧ್ಯವಾಗುವುದು. ಅಮೃತವನ್ನು ಕುಡಿದುದರಿಂದ ಸಂತೋಷವು ದೊರೆಯಿತು; ಆಗ ಪ್ರಭುವಿನ ಚರಣಗಳಲ್ಲಿ ಸಮ್ಮಾನವೂ ದೊರೆಯಿತು. ಅನುದಿನವೂ ಶಬ್ದದಲ್ಲಿ ಲೀನವಾಗಿದ್ದರೆ ಘಟ ಘಟದಲ್ಲಿ ಅವನ ವಾಣಿ ಗುಂಜಿಸುವುದು, ಕೇಳಿಸುವುದು. ಈ ಜ್ಞಾನವು ಅಪರೂಪವಾಗಿ ಒಬ್ಬರಿಗೆ ಸಿಗುವುದು; ಅವನು ಗುರುವಿನ ಮುಖಾಂತರವಾಗಿಯೆ ಅದನ್ನು ಮನಸ್ಸಿಗೆ ತಿಳಿಸುವನು. ನಾಮವನ್ನು ಮರೆಯಕೂಡದು; ಶಬ್ದಸಾಧನೆಯಿಂದಲೇ ಮುಕ್ತಿಲಭ್ಯವೆಂದು ನಾನಕನು ಹೇಳುತ್ತಾನೆ.

(೬೨)

(೬೦)

ದಯೆಯ ಮಸೀದೆ ಕಟ್ಟುವವನು, ನಿಷ್ಠೆಯ ಜಮಖಾನೆಯನ್ನು ಹಾಸುವವನು ಸನ್ಮಾರ್ಗದ ಗಳಿಕೆಯೇ ಕುರಾಣವೆಂದು ಬಗೆಯುವವನು, ಪಾಪಕ್ಕೆ ನಾಚುವುದೇ ಸುಂತಿ ಎಂದು ಬಗೆಯುವವನು, ಶೀಲವೇ ರೋಜಾ (ಉಪವಾಸ) ಎಂದು ಅರಿತು ನಡೆಯುವವನು ಮುಸಲ್ಮಾನನು. ನೀನಿಂಥ ಮುಸಲ್ಮಾನನಾಗು. ಸತ್ಕರ್ಮವೇ ನಿನ್ನ ಕಾಬಾ, ಸತ್ಯವೇ ನಿನ್ನ ಪೀರನ ಕಲಮಾ (ಮೂಲಮಂತ್ರ), ಸದಾಚರಣೆಯೆ ನಮಾಜು. ಶಾಂತ ಸ್ವಭಾವವೇ ತಸಬೀಹ (ಜಪಮಾಲೆ) ಮೌಲಾ (ಪ್ರಭು) ನೇ ನಿನ್ನ ಮರ್ಯಾದೆ ಕಾಪಾಡುವವನು ಎಂದು ನಾನಕನು ಹೇಳುತ್ತಾನೆ. ಇನ್ನೊಬ್ಬರ ಅಧಿಕಾರ ಕಸಿದುಕೊಳ್ಳುವುದು ಮುಸಲ್ಮಾನರು ಹಂದಿ ತಿಂದಂತೆ, ಹಿಂದೂಗಳು ಗೋವು ತಿಂದಂತೆ ಎಂದು ನಾನಕನು ಹೇಳುತ್ತಾನೆ. ಸತ್ತ ಅಪವಿತ್ರ ವಸ್ತುಗಳನ್ನೂ ಇನ್ನೊಬ್ಬರ ದುಡಿಮೆಯ ವಸ್ತುಗಳನ್ನೂ ತಿನ್ನದಿದ್ದರೆ ಗುರು ಅಥವಾ ಪೀರನು ಸಾಹಾಯಕನಾಗುವನು. ಕೇವಲ ಮಾತುಗಳಿಂದ ಸ್ವರ್ಗವು ಸಿಗಲಾರದು; ಸತ್ಯವನ್ನು ಗಳಿಸುವುದರಿಂದ ಮುಕ್ತಿ ದೊರೆಯುವುದು. ಹರಾಮ ಅರ್ಥಾತ್ ನಿಷಿದ್ಧಮಾಂಸದಲ್ಲಿ ಬಹಳಷ್ಟು ಮಸಾಲೆ ಹಾಕಿದರೆ ಅದು ಎಂದೂ ಹಲಾಲ (ಭೋಗ್ಯ) ವಾಗಲಾರದು. ಸುಳ್ಳಿನಿಂದ ಸುಳ್ಳೇ ಪದರಿಗೆ ಬೀಳುವುದೆಂದು ನಾನಕನು ಹೇಳುತ್ತಾನೆ. ಐದು ನಮಾಜುಗಳು, ಐದು ಹೊತ್ತು ಮತ್ತು ಐದೇ ಅವುಗಳ ಹೆಸರು. ಮೊದಲನೆಯದು ಸತ್ಯ, ಎರಡನೆಯದು ಹಲಾಲ, ಮೂರನೆಯದು ದೇವರ ಹೆಸರಿನಲ್ಲಿ ದಾನ, ನಾಲ್ಕನೆಯದು ಆಚರಣೆಯನ್ನು ಪವಿತ್ರವಾಗಿಡುವುದು, ಐದನೆಯದು ದೇವರ ಗುಣಗಾನ ಮಾಡುವುದು. ಸತ್ಕರ್ಮದ ಕಲಮಾ ಓದಿರಿ ಮತ್ತು ಹೀಗೆ ಮುಸಲ್ಮಾನರೆನಿಸಿಕೊಳ್ಳಿರಿ. ಅಸತ್ಯವಂತರಿಗೆ ಅವರ ಅಸತ್ಯಕ್ಕೆ ಅನುಗುಣವಾಗಿ ಸ್ಥಳವು ಸಿಗುವುದೆಂದು ನಾನಕನು ಹೇಳುತ್ತಾನೆ.

(೧೪೦–೪೧)



 

(೬೧)

ಮುಸಲಮಾಣು ಕಹಾವಣು ಮುಸಕಲು ಜಾ ಹೋಇ ತಾ ಮುಸಲಮಾಣು ಕಹಾವೈ ॥
ಅವಲಿ ಅಉಲಿ ದೀನು ಕರಿ ಮಿಠಾ ಮಸಕಲಮಾನಾ ಮಾಲು ಮಸಾವೈ ॥
ಹೋಇ ಮುಸಲಿಮುದೀನ ಮುಹಾಣೈ ಮರಣ ಜೀವಣ ಕಾ ಭರಮು ಚುಕಾವೈ ॥
ರಬ ಕೀ ರಜಾಇ ಮನೆ ಸಿರ ಉಪರಿ ಕರತಾ ಮನೆ ಆಪು ಗವಾವೈ ॥
ತಉ ನಾನಕ ಸರಬ ಜೀಆ ಮಿಹರಂಮತಿ ಹೋಇ ತ ಮುಸಲಮಾಣು ಕಹಾವೈ ॥ ೧ ॥

**ವಾರ ಮಾಝು, ಸಲೋಕ ೧,ಪಉಡೀ ೮.**

(೬೨)

ಕಿಆ ಖಾದೈ ಕಿಆ ಪೈಧೈಹೋಇ ॥ ಜಾ ಮನಿ ನಾಹೀ ಸಚಾ ಸೋಇ ॥
ಕಿಆ ಮೇವಾ ಕಿಆ ಘಿಉ ಗುಡ ಮಿಠಾ ಕಿಆ ಮೈದಾ ಕಿಆ ಮಾಸು ॥
ಕಿಆ ಕಪಡು ಕಿಆ ಸೇಜ ಸುಖಾಲೀ ಕೀಜಹಿ ಭೋಗ ಬಿಲಾಸ ॥
ಕಿಆ ಲಸಕರ ಕಿಆ ನೇಬ ಖವಾಸೀ ಆವೈ ಮಹಲೀ ವಾಸು ॥
ನಾನಕ ಸಚೈ ನಾಮ ವಿಣು ಸಭೆ ಟೋಲ ವಿಣಾಸು ॥ ೨ ॥

**ವಾರ ಮಾಝು, ಪಉಡಿ ೧೦, ಸಲೋಕ ೨.**

(೬೩)

ಖಿಮಾ ಗಹಿ ಬ್ರತು ಸಿಲ ಸಂತೋಖಂ ॥ ರೋಗು ನ ಬಿಆಪೈ ನಾ ಜಮದೋಖಂ ॥
ಮುಕತ ಭಏ ಪ್ರಭ ರೂಪ ನ ರೇಖಂ ॥ ೧ ॥
ಜೋಗೀ ಕಉ ಕೈಸಾ ಡರು ಹೋಇ ॥ ರೂಖಿ ಬಿರಖಿ ಗೃಹ ಬಾಹರಿ ಸೋಇ ॥ ೧ ॥ ರಹಾಉ ॥
ನಿರಭಉ ಜೋಗೀ ನಿರಂಜನು ಧಿಆವೈ ॥ ಅನುದಿನು ಜಾಗೈ ಸಚಿ ಲಿವ ಲಾವೈ ॥
ಸೋ ಜೋಗೀ ಮೇರೆ ಮನಿ ಭಾವೆ ॥ ೨ ॥
ಕಾಲು ಜಾಲು ಬ್ರಹಮ ಅಗನೀ ಜಾರೆ ॥ ಜರಾ ಮರಣ ಗತು ಗರಬು ನಿವಾರೆ ॥
ಆಪಿ ತರೈ ಪಿತರಿ ನಿಸತಾರೆ ॥ ೩ ॥
ಸತಿಗುರು ಸೇವೆ ಸೋ ಜೋಗೀ ಹೋಇ ॥ ಭೈ ರಚಿ ರಹೈ ಸು ನಿರಭಉ ಹೋಇ ॥
ಜೈಸಾ ಸೇವೈ ತೈಸೋ ಹೋಇ ॥ ೪ ॥
ನರ ನಿಹಕೇವಲ ನಿರಭಉ ನಾಉ ॥ ಅನಾಥಹ ನಾಥ ಕರೆ ಬಲಿ ಜಾಉ ॥
ಪುನರಪಿ ಜನಮು ನಾಹೀ ಗಾಣ ಗಾಉ ॥ ೫ ॥
ಅಂತರಿ ಬಾಹರಿ ಏಕೋ ಜಾಣೈ ॥ ಗುರ ಕೈ ಸಬದೆ ಆಪು ಪಛಾಣೈ ॥
ಸಾಚೈ ಸಬದಿ ದರಿ ನಿಸಾಣೈ ॥ ೬ ॥
ಸಬದಿ ಮರೈ ತಿಸು ನಿಜ ಘರಿ ಬಾಸಾ ॥ ಆವೈ ನ ಜಾವೈ ಚೂಕೈ ಆಸಾ ॥
ಗುರ ಕೈ ಸಬದಿ ಕಮಲು ಪರಗಾಸಾ ॥ ೭ ॥

(೬೧)
ಮುಸಲ್ಮಾನನೆನಿಸಿಕೊಳ್ಳುವುದು ಕಠಿಣವಾದುದು. ಇದ್ದರೆ ಅನ್ನಿಸಿಕೊಳ್ಳಲಿ. ಮೊದಲನೆಯದಾಗಿ ಅವನು ತನ್ನ ವಲಿಗಳು ಹೇಳಿದ ದೀನ (ಧರ್ಮ)ವನ್ನು ಪ್ರೀತಿಸಬೇಕು. ಮನದಿಂದ ಅಹಂಕಾರದ ತುಕ್ಕನ್ನು ಕಳೆಯಬೇಕು ಮತ್ತು ತನ್ನ ಸಂಪತ್ತನ್ನೆಲ್ಲ ಹಂಚಿ ಬಿಡಬೇಕು. 'ದೀನ'ದ ದಾರಿಯಲ್ಲಿ ಅಖಂಡ ವಿಶ್ವಾಸವಿರಿಸಬೇಕು. ಜನನ–ಮರಣದ ಅಂತರವನ್ನು ಅಳಿಸಬೇಕು. ಪ್ರಭುವಿನ ಪ್ರಸನ್ನತೆಯನ್ನು ಶಿರಸ್ಸಿನಲ್ಲಿ ಧಾರಣಮಾಡಬೇಕು. ಪ್ರಭುವು ಪರಮ ಸತ್ಯನೆಂದು ಒಪ್ಪಬೇಕು, ಅಹಾಂಕಾರವನ್ನು ತ್ಯಜಿಸಬೇಕು. ಹೀಗೆ ಮಾಡಿದಾಗ ಅವನು ಸರ್ವ ಜೀವಜಾತಿಗಳ ಮೇಲೆ ದಯೆ ತೋರುವನು. ಹೀಗಿದ್ದರೆ ಅವನು ಮುಸಲ್ಮಾನನೆನಿಸಿಕೊಳ್ಳುವನು ಎಂದು ನಾನಕನು ಹೇಳುತ್ತಾನೆ.

(೧೪೧)

(೬೨)
ಮನದಲ್ಲಿ ನಿಜವಾದ ಪ್ರಭುವಿನ ನಿವಾಸವು ಇಲ್ಲದಿದ್ದರೆ ಒಳ್ಳೆಯ ಊಟ ಮಾಡುವುದರಿಂದ, ಬಟ್ಟೆ ತೊಡುವುದರಿಂದ ಏನು ಪ್ರಯೋಜನ? ಒಣಗಿದ ಫಲ, ತುಪ್ಪ, ಬೆಲ್ಲ, ಮಿಠಾಯಿ, ಮೈದಾ, ಮಾಂಸ ತಿನ್ನುವುದರಿಂದೇನು ಲಾಭ? ಸುಂದರ ವಸ್ತ್ರಧಾರಣ, ಸುಖದ ಸುಪ್ಪತ್ತಿಗೆ, ಭೋಗ ವಿಲಾಸಗಳಿಂದೇನು ಉಪಯೋಗ? ಸೈನ್ಯ, ಸರದಾರರು, ಗುಲಾಮರು ಮುಂತಾದವರಿಂದೇನಾಗುವುದು? ಮಹಲಿನಲ್ಲಿರುವುದರಿಂದೇನು ಲಾಭ? ನಿಜವಾದ ನಾಮದ ಹೊರತು ಎಲ್ಲ ಆಡಂಬರವು ವಿನಾಶಕಾರಿ.

(೧೪೨)

(೬೩)
ಕ್ಷಮಾಗುಣವನ್ನು ಅಳವಡಿಸಿಕೊಂಡು ಶೀಲಸಂತೋಷಗಳ ವ್ರತವನ್ನು ಹಿಡಿದವರಿಗೆ ರೋಗವು ಬರುವುದಿಲ್ಲ, ಯಮದೋಷವೂ ತಗಲುವುದಿಲ್ಲ. ರೂಪವರ್ಣಗಳಿಲ್ಲದ ಪ್ರಭುವಿನಲ್ಲಿ ಅವರು ಬೆರೆತು ಮುಕ್ತರಾಗುವರು. ಯೋಗಿಗೇನು ಭಯ? ರೂಕ್ಷ ವೃಕ್ಷದಲ್ಲೂ ಮನೆಯ ಹೊರಗೂ ಅವನಿಗೋಸ್ಕರ ಪ್ರಭು ಇರುವನು. ನಿರ್ಭಯ ಯೋಗಿ ನಿರಂಜನನ ಧ್ಯಾನಮಾಡುವನು; ಅನುದಿನ ಜಾಗೃತನಿರುವನು; ಸತ್ಯದಲ್ಲಿ ತಲ್ಲೀನನಾಗಿರುವನು. ಇಂಥ ಯೋಗಿ ನನಗೆ ಪ್ರೀಯನು. ಅವನು ಬ್ರಹ್ಮಜ್ವಾಲೆಯಿಂದ ಕಾಲನ ಜಾಲವನ್ನು ಸುಟ್ಟು ಹಾಕುವನು; ಜರಾ-ಮರಣಗಳಿಂದ ದೂರಾಗಿ ಅಹಂಕಾರದ ನಿವಾರಣೆ ಮಾಡುವನು. ಅವನು ಸ್ವತಃ ಮುಕ್ತನಾಗುವನಲ್ಲದೆ ತನ್ನ ಪಿತೃಗಳನ್ನೂ ಮುಕ್ತಮಾಡುವನು. ಸದ್ಗುರುವಿನ ಸೇವೆ ಮಾಡುವವನೇ ನಿಜವಾದ ಯೋಗಿ; ಅವನು ಪ್ರಭುವಿಗೆ ಅಂಜಿ ಇದ್ದು ನಿರ್ಭಯನಾಗಿರುವನು. ಯಾವ ಇಷ್ಟದೇವನ ಸೇವೆಮಾಡುವನೋ ಆ ಇಷ್ಟದೇವನಂತೆ ಅವನಾಗುವನು. ಆ ನಿರ್ಲಿಪ್ತ ಪುರುಷನಿಗೆ ನನ್ನನ್ನು ಸಮರ್ಪಿಸುವೆನು. ಅನಾಥನನ್ನು ಸನಾಥನನ್ನಾಗಿ ಮಾಡುವವನಿಗೇ ನಿರ್ಭಯನೆಂದು ಹೆಸರು. ಅವನ ಗುಣಗಾನಮಾಡುವುದರಿಂದ ಪುನಃ ಜನ್ಮವಾಗದು. ಒಳಗೂ ಹೊರಗೂ ಒಬ್ಬನೇ ಇರುವನೆಂದು ತಿಳಿಯುವನು; ಗುರುವಿನ ಶಬ್ದಗಳ ಮುಖಾಂತರ ತನ್ನ ಆತ್ಮವನ್ನು ಅರಿಯುವನು; ಸತ್ಯಶಬ್ದದ ಮುಖಾಂತರ ಪ್ರಭುವಿನ ದ್ವಾರವನ್ನು ಹುಡುಕಿಕೊಳ್ಳುವನು. ಶಬ್ದದ ಮುಖಾಂತರ ಅಹಂಭಾವವನ್ನು ನಾಶಗೊಳಿಸಿ ತನ್ನ ನಿಜವಾದ ಮನೆಯಲ್ಲಿ ವಾಸಿಸುವನು. ಆಶಾತೀತನಾಗಿ ಅವನು ಜನನ-ಮರಣದಿಂದ ಮುಕ್ತನಾಗುವನು. ಗುರುವಿನ ಶಬ್ದದ ಮುಖಾಂತರ ಅವನ ಹೃದಯ ಕಮಲವು ಅರಳುವುದು. ನೋಡಿದಡೆಗಳಲ್ಲೆಲ್ಲ ಆಸೆ–ನಿರಾಸೆಗಳೇ ಕಾಣು

ಜೋ ದೀಸೈ ಸೋ ਨਿਰਾਸਾ ॥ ಕಾಮ ಕ್ರೋಧ ಬಿಖು ಭೂಖು ಪಿಆಸಾ ॥
ನಾನಕ ವಿರಲೆ ಮಿಲಹಿ ಉದಾಸಾ ॥ ೮ ॥ ೭ ॥

ಗਲੁಡೀ ಅಸಟಪದೀਅ.

(೬೪)

ಐಸೌ ದಾಸು ಮಿಲೈ ಸುಖು ಹೋಈ ॥ ದುಖು ವಿಸರೈ ಪಾವೈ ಸಚು ಸೋಈ ॥ ೧ ॥
ದರಸನು ದೇಖಿ ಭಈ ಮತಿ ಪೂರಿ ॥ ಅಡಸಠಿ ಮಜನು ಚರನಹ ಧೂರಿ ॥ ೧ ॥ ರಹಾಉ ॥
ನೇತ್ರ ಸಂತೋಖೆ ಏಕ ಅವ ತಾರಾ ॥ ಜಿಹ ವಾ ಸೂಚೀ ಹರಿರಸ ಸಾರಾ ॥ ೨ ॥
ಸಚು ಕರಣೀ ಅಭಅಂತರಿ ಸೇವಾ ॥ ಮನು ತ್ರಿಪತಾಸಿಆ ಅಲಖ ಅಭೇವಾ ॥ ೩ ॥
ಜಹ ಜಹ ದೇಖಉ ತಹತಹ ಸಾಚಾ ॥ ಬಿನು ಬೂಝੈ ಝಗರತ ಜಗು ಕಾಚಾ ॥ ೪ ॥
ಗುರು ಸಮಝಾವೈ ಸೋಝೀ ಹೋಈ ॥ ಗುರುಮುಖಿ ಬಿರಲಾ ಬೂಝೈ ಕೋಈ ॥ ೫ ॥
ಕರಿ ಕಿರಪಾ ರಾಖಹು ರಖವಾಲೆ ॥ ಬಿನು ಬೂಝੈ ಪಸು ಭಏ ಬೇ ತಾಲೆ ॥ ೬ ॥
ಗುರಿ ಕಹಿಆ ಅವರು ನಹೀ ದೂಜಾ ॥ ಕಿಸು ಕಹು ದೇಖಿ ಕರਉ ಅನ ಪೂಜಾ ॥ ೭ ॥
ಸಂತ ಹੇತಿ ಪ್ರಭಿ ತ್ರಿಭವಣ ಧಾರೆ ॥ ಆತಮು ಚೀನੈ ಸು ತತು ಬೀಚಾರೆ ॥ ೮ ॥
ಸಾಚು ರಿದੈ ಸಚು ಪ್ರೇಮ ನਿਵਾਸ ॥ ಪ್ರಣವತಿ ನಾನಕ ಹಮ ತಾ ಕೇ ದಾಸ ॥ ೯ ॥ ೮ ॥

ಗಉਡੀ ಅਸਟਪਦੀਅ.

(೬೫)

ಗುರ ಕಾ ಸಬದು ಮನੈ ಮಹਿ ಮੁੰਦ੍ਰਾ ಖਿੰਥਾ ಖਿಮਾ ಹਢਾವਉ ॥
ಜೋ ಕಿಛು ಕਰੈ ಭಲಾ ಕರಿ ಮਾਨਉ ಸಹಜ ಜੋಗ ನಿಧಿ ಪಾವಉ ॥ ೧ ॥
ಬಾಬಾ ಜುಗತಾ ಜੀਉ ಜುಗಹ ಜುಗ ಜೋಗೀ ಪರಮ ತಂತ ಮಹಿ ಜೋಗಂ ॥
ಅಮ್ರಿತು ನಾಮು ನਿਰಂಜನ ಪਾਇಆ ಗਿಆਨ ಕਾਇಆ ರಸ ಭೋಗಂ ॥ ರಹಾਉ ॥
ಸಿವ ನಗರೀ ਮਹਿ ಆಸਣਿ ಬੈਸਉ ಕಲಪ ತਿਆಗੀ ಬಾದಂ ॥
ಸಿਙੀ ಸಬದು ಸದਾ ಧੁਨਿ ಸੋਹੈ ಅਹਿਨਿਸਿ ಪੂਰੈ ನਾਦಂ ॥ ೨ ॥
ಪਤು ವੀਚਾਰು ਗਿਆਨ ಮਤಿ ಡಂಡਾ ವರਤਮਾਨ ವಿಭੂਤਂ ॥
ಹರಿ ಕੀਰਤਿ ರਹਰਾਸਿ ಜਮਾਰਿ ಗੁਰਮੁਖਿ ಪੰਥು ಅਤੀਤಂ ॥ ೩ ॥
ಸಗਲೀ ಜੋਤਿ ಹಮਾਰੀ ಸಂਮਿਆ ನਾਨਾ ವರਨ ಅನೇਕಂ ॥
ಕಹು ನಾನಕ ಸುಣਿ ಭರಥਰਿ ಜೋಗೀ ಪਾರਬ੍ਰਹਮ ಅವ ಏಕಂ ॥ ೪ ॥ ೩ ॥ ೩೭ ॥

ರಾಗ ಅಸಾ.

ತ್ತಿರುವುವು, ಕಾಮ, ಕ್ರೋಧ, ವಿಷ, ಹಸಿವು, ಬಾಯಾರಿಕೆಗಳೇ ಕಾಣುತ್ತಿರುವುವು. ಇವುಗಳಿಂದ ನಿರ್ಲಿಪ್ತರಾಗಿ ಉದಾಸೀನರಾಗಿ ಇರುವ ಜನರು ಅಪರೂಪವೆಂದು ನಾನಕನು ಹೇಳುತ್ತಾನೆ.

(೨೨೩-೨೪)

(೬೪)

ಇಂಥ ದಾಸನು ಸಿಕ್ಕಿದರೆ ಸುಖ ಉಂಟಾಗುವುದು, ದುಃಖ ಮರೆತುಹೋಗುವುದು; ಸತ್ಯವು ಪ್ರಾಪ್ತವಾಗುವುದು. ಅವನ ದರ್ಶನದಿಂದ ಬುದ್ಧಿ ಪೂರ್ಣತೆಯನ್ನು ಪಡೆಯುವುದು; ಅವನ ಚರಣಧೂಳಿ ಅರವತ್ತೆಂಟು ತೀರ್ಥಸ್ನಾನಗಳಿಗೆ ಸಮಾನ. ಅವನ ಕಣ್ಣುಗಳಲ್ಲಿ ಸಂತೋಷವಿರುತ್ತದೆ; ಅವನ ಮನಸ್ಸು ನಿರಂತರ ಒಬ್ಬನಲ್ಲಿ ನೆಟ್ಟಿದೆ, ಅವನ ಶುಚಿಯಾದ ನಾಲಗೆ ಹರಿರಸದ ಸಾರವನ್ನು ಸವಿದಿದೆ. ಅವನ ಕೃತಿಗಳು ಸತ್ಯಾಧರಿತವಾದುವು, ಅವನ ಹೃದಯದಲ್ಲಿ ಸೇವೆಯ ಭಾವವು ಇರುವುದು. ಅಗೋಚರನೂ, ಅಭೇದ್ಯನೂ ಆದ ಪ್ರಭುವಿನ ಮಿಳನದಿಂದ ಮನವು ತೃಪ್ತವಾಗಿರುವುದು. ಎಲ್ಲಿ ನೋಡಿದರೆ ಅಲ್ಲಿ ಅದೇ ನಿಜವಾದ ಪ್ರಭುಕಾಣುವನು. ಅವನನ್ನು ಅರಿಯದೆ ಕಚ್ಚಾ ಜಗತ್ತು ಜಗಳಾಡುತ್ತಿರುವುದು. ಗುರು ತಿಳಿಸುವುದರಿಂದ ತಿಳಿದುಕೊಳ್ಳುವೆ; ಅಪರೂಪವಾಗಿ ಒಬ್ಬ ಗುರುಮುಖನು ಅವನನ್ನು ಅರಿಯುವನು. ರಕ್ಷಕನೇ, ನೀನು ಕೃಪೆಮಾಡಿ ನಮ್ಮನ್ನು ರಕ್ಷಿಸು; ಜ್ಞಾನವಿಲ್ಲದ ನಾವು ಪಶುಸಮಾನರು. ನಿರಂಕಾರನ ಹೊರತಾಗಿ ಬೇರೊಬ್ಬನಿಲ್ಲವೆಂದು ಗುರುನಾನಕನು ಹೇಳುತ್ತಾನೆ; ಬೇರೆ ಯಾರನ್ನು ನೋಡಲಿ, ಪೂಜಿಸಲಿ? ಸಂತರ ಸಲುವಾಗಿ ಪ್ರಭು ಈ ತ್ರಿಭುವನವನ್ನು ಧಾರಣಮಾಡಿರುವನು; ಆತ್ಮವನ್ನು ಅರಿತು ತತ್ವವನ್ನು ಚಿಂತಿಸುವವನೇ ಸಂತನು. ಸತ್ಯ ಹೃದಯದಲ್ಲಿ ಸತ್ಯದ ಪ್ರೇಮವು ನೆಲಸುವುದು; ನಾನು ಅವನ ದಾಸನು ಎಂದು ನಾನಕನು ಹೇಳುತ್ತಾನೆ.

(೨೨೪)

(೬೫)

ಮನಕೆ ಗುರುವಿನ ಶಬ್ದದ ಮುದ್ರೆಯನಿಕ್ಕಿರಿ, ಮತ್ತು ಕ್ಷಮೆಯ ದುಪ್ಪಟಿಹೊದೆಯಿರಿ. ಅವನು ಮಾಡಿದುದು ಒಳ್ಳಿತೆಂದು ಬಗೆದು ಸ್ವೀಕರಿಸಿರಿ. ಸಹಜವಾಗಿ ಯೋಗನಿಧಿಯನ್ನು ಪಡೆಯಿರಿ. ಬಾಬಾ, ಪರಮ ತತ್ವದೊಡನೆ ಸೇರಿದವನು ಯುಗಯುಗದ ವರೆಗೆ ಯೋಗಿಯಾಗಿ ಇರುವನು ಅವನಿಗೆ ನಿರಂಜನನ ನಾಮಾಮೃತವು ದೊರೆತಿರುವುದು, ಅವನ ಕಾಯವು ಜ್ಞಾನರಸವನ್ನು ಈಂಟಿರುವುದು. ಶಿವನಗರಿಯ ಆಸನದ ಮೇಲೆ ಕೂತುಕೊಳ್ಳಿರಿ, ಎಲ್ಲ ಕಲ್ಪನೆ, ವಾದವಿವಾದಗಳನ್ನು ತ್ಯಜಿಸಿರಿ. ಕೊಂಬಿನ ಶಬ್ದದ ಧ್ವನಿ ಸದಾ ಇಂಪಾದುದು; ಅಹರ್ನಿಶಿ ಪೂರ್ಣನಾದವು ವ್ಯಾಪ್ತವಾಗಿರುವುದು. ವಿಚಾರವು ಇದರ ಕಮಂಡಲು, ಜ್ಞಾನ—ಮತಿ ಇದರ ದಂಡ, ವರ್ತಮಾನವೇ ವಿಭೂತಿ; ಹರಿಕೀರ್ತನವೇ ದಿನಚರ್ಯೆ. ಹೀಗೆ ಗುರುಮುಖನ ಪಂಥವು ಅತೀತವಾದುದು. ನಾನಾ ವರ್ಣಗಳಲ್ಲಿ ಹಬ್ಬಿದ ಜ್ಯೋತಿಯೋ ಯೋಗಿಗೆ ಆಧಾರವಾದುದು. ಓ ಭರ್ತೃಹರಿ ಕೇಳು, ಯೋಗಿಯ ಮನವು ಸದಾ ಬ್ರಹ್ಮನಲ್ಲಿ ನೆಲಸಿರುವುದು.

(೩೫೯–೬೦)

[ಮನ ಕೋ ಏಕಾಗ್ರ ಕರನೇ ಕೇಲಿಯೆ ಯೋಗೀ ಮದಪಾನ ಕಿಯಾ ಕರತೇ । ಯೋಗಿಯೋನೆ ಐಸಾ ಹೀ ಏಕ ಪ್ಯಾಲಾ ಗುರು ನಾನಕ ದೇವಕೋ ಭೀ ಪೇಶ ಕಿಯಾ । ಯಹ ಪದ ಉಸೀ ಕೇ ಪ್ರತ್ಯುತ್ತರ ಮೆ ಹೈ]

(೬೬)

ಗುಡು ಕರಿ ಗಿਆਨು ಧਿਆਨು ಕರಿ ಧಾਵੈ ಕರಿ ಕರಣೀ ಕಸು ಪਾਈਐ ॥
ಭಾಠೀ ಭವನು ಪ್ರೇಮ ಕಾ ಪೋਚਾ ਇತು ರਸਿ ਅਮਿਉ ਚੁਆਈਐ ॥ ੧ ॥
ಬಾಬಾ ಮನು ಮತವಾರೌ ನಾಮ ರಸು ಪೀವೈ ಸಹಜ ರಂಗ ರಚಿ ರਹਿਆ ॥
ਅਹਿਨਿਸਿ ಬನೀ ಪ್ರೇಮ ಲಿವ ಲಾಗೀ ಸಬದು ಅನಾಹದ ಗਹਿਆ ॥ ੧ ॥ ರಹಾਉ ॥
ಪೂರಾ ಸಾಚು ಪಿಆਲਾ ಸಹಜೇ ತಿಸಹಿ ಪੀਆਏ ಜಾ ಕਉ ನದರಿ ಕರੇ ॥
ಅಮೃತ ಕಾ ವಾಪಾರಿ ಹೋವੈ ಕਿਆ ಮದಿ ಛੂਛੈ ಭਾਉ ಧਰੇ ॥ ੨ ॥
ಗುರ ಕೀ ಸಾಖೀ ಅಮೃತ ವಾಣೀ ಪੀਵਤ ಹੀ ಪರವಾਣು ಭਇਆ ॥
ದರ ದರಸನ ಕಾ ಪ್ರೀತಮು ಹೋವೈ ಮੁਕತਿ ಬೈಕುಂಠೆ ಕರೈ ಕਿਆ ॥ ೩ ॥
ಸಿಫತೀ ರತಾ ಸದ ಬೈರಾಗಿ ಜੂਐ ಜನಮು ನ ಹಾರೈ ॥
ಕಹು ನಾನಕ ಸುಣಿ ಭರಥರಿ ಜೋಗೀ ಖੀਵਾ ಅಮೃತ ಧಾರೈ ॥ ೪ ॥ ೪ ॥ ೩೮ ॥

[ಮನವನ್ನು ಏಕಾಗ್ರಗೊಳಿಸಲು ಯೋಗಿಗಳು ಮದ್ಯಪಾನ ಮಾಡುವ ಪರಿಪಾಟಿ ನಡೆದುಬಂದಿದೆ. ಯೋಗಿಗಳು ಬಂದು ಬಟ್ಟಲು ಮದ್ಯವನ್ನು ಗುರುನಾನಕ ದೇವರಿಗೂ ಕೊಟ್ಟರು. ಈ ಪದವು ಇದಕ್ಕೆ ಪ್ರತ್ಯುತ್ತರ ರೂಪವಾಗಿ ಇದೆ.]

(೬೬)

ಜ್ಞಾನದ ಬೆಲ್ಲ ತೆಗೆದುಕೊಳ್ಳಿರಿ, ಧ್ಯಾನವೆ ದಾಳಿಯ ಹೂವುಗಳು, ಕರ್ಮ ಎಂಬ ಜಾಲಿಮರದ ತೊಗಟೆಯನ್ನು ಅದರಲ್ಲಿ ಹಾಕಿಬಿಡಿರಿ. ದಶಮ ದ್ವಾರದಲ್ಲಿ ಭಟ್ಟಿಯನ್ನು ತಯಾರಿಸಿರಿ, ಅದರ ಮೇಲೆ ಪ್ರೇಮದ ಲೇಪಮಾಡಿರಿ, ಅದರಿಂದ ಅಮೃತ ರಸವು ಸೋರುವುದು. ಬಾಬಾ, ಮನವು ಪ್ರೇಮದ ರಸವನ್ನು ಕುಡಿದು ಉನ್ಮತ್ತವಾಗಿ ಸಹಜನಲ್ಲಿ ಸೇರಿ ಮತ್ತವಾಗಿರುವುದು. ಈ ಸ್ಥಿತಿ ಹಗಲಿರುಳೂ ಇರುವುದು, ಪರಮಾತ್ಮನ ಪ್ರೇಮದಲ್ಲಿ ಮನವು ನೆಟ್ಟಿರುವುದು. ನಾಶವಾಗದೆ ಇರುವ ಶಬ್ದವನ್ನು ನಾನು ಹಿಡಿದಿಟ್ಟಿರುವೆನು. ಈ ಸಹಜದ ಬಟ್ಟಲು ವಿಶುದ್ಧ ಸತ್ಯದಿಂದ ತುಂಬಿರುವುದು. ಪ್ರಭುವಿನ ಕೃಪೆಯಾದವನಿಗೆ ಇದು ಕುಡಿಯಲು ಸಿಗುವುದು. ಈ ಅಮೃತದ ವ್ಯಾಪಾರಿ ಕಮ್ಮಿ ದರ್ಜೆಯ ಕೀಳು ಮದ್ಯವನ್ನು ಹೇಗೆ ಮೆಚ್ಚಿಯಾನು? ಅಮೃತವಾಣಿಗೆ ಸಾಕ್ಷಿಯಾಗಿರುವವನು ಸ್ವಯಂ ಗುರುವೇ ಇದನ್ನು ಕುಡಿಯುತ್ತಲೆ ನಾನು ಪ್ರಭುಗೆ ಸ್ವೀಕೃತನಾದೆನು. ಪ್ರಭುದರ್ಶನಪ್ರೇಮಿಗೆ ಮುಕ್ತಿಯಿಂದ, ವೈಕುಂಠದಿಂದ ಏನು ಪ್ರಯೋಜನ? ಪ್ರಭುವಿನ ಗುಣಗಾನದಲ್ಲಿ ತಲ್ಲೀನನಾಗಿರುವ ವೈರಾಗಿಯು ಸದಾ ಪ್ರಪಂಚದಿಂದ ನಿರ್ಲಿಪ್ತನಾಗಿರುವನು. ಅವನು ತನ್ನ ಜನ್ಮವನ್ನು ವ್ಯರ್ಥ ಕಳೆಯುವುದಿಲ್ಲ. ಭರ್ತೃಹರಿಯೆ ಕೇಳು, ಅಮೃತಪಾನ ಮಾಡಿದ ಯೋಗಿಯು ಸದಾ ಮತ್ತನಾಗಿರುವನೆಂದು ನಾನಕನು ಹೇಳುತ್ತಾನೆ.

(೩೬೦)

ಭಾಗ ಮೂರು

# ಲಕ್ಷ್ಯ-ಪ್ರಾಪ್ತಿ ಕೇ ಸಾಧನ

(ಗುರಿ ಮುಟ್ಟುವ ಸಾಧನಗಳು)

## ಸದ್‌ಗುರು

ಗುರಾ ಇಕ ದೇಹಿ ಬುಝಾಈ ।
ಸಭನಾ ಜೀಆ ಕಾ ಇಕು ದಾತಾ ಸೋ ಮೈ ವಿಸರಿ ನ ಜಾಈ ॥[1]
ಜಪು ಪಉಡಿ ೬.

1. ಓ ಗುರುವೆ, ಆ ಒಬ್ಬನ ಜ್ಞಾನವನ್ನು ದಯೆಪಾಲಿಸು ನನಗೆ. ಎಲ್ಲ ಜೀವಗಳಿಗೆ ದಾತನಾಗಿರುವವನನ್ನು ನಾನೆಂದಿಗೂ ಮರೆಯದಂತೆ ಕರುಣಿಸು.

## ಗುರು ಕೀ ಅವಶ್ಯಕತಾ

(೬೭)

ಬಿನು ಸತಿಗುರ ಕಿನ್ನೈ ನ ಪಾಇಓ ಬಿನು ಸತಿಗುರ ಕಿನ್ನೈ ನ ಪಾಇಆ ॥
ಸತಿಗುರ ವಿಚಿ ಆಪು ರಖಿಓನು ಕರಿ ಪರಗಟು ಆಖಿ ಸುಣಾಇಆ ॥
ಸತಿಗುರ ಮಿಲಿಐ ಸದಾ ಮುಕತು ಹೈ ಜಿನಿ ವಿಚಹು ಮೋಹು ಚುಕಾಇಆ ॥
ಉತಮು ಏಹು ವೀಚಾರು ಹೈ ಜಿನಿ ಸಚೇ ಸಿಉ ಚಿತು ಲಾಇಆ ॥
ಜಗ ಜೀವನು ದಾತಾ ಪಾಇಆ ॥ ೬ ॥

**ವಾರ ಆಸಾ, ಪಉಡೀ ೬.**

(೬೮)

ಜೇ ತೂಂ ತಾರೂ ಪಾಣಿ ತಾಹು ಪುಛು ತಿಡನ್ನ ಕಲ ॥
ತಾಹೂ ಖರೆ ಸುಜಾಣ ವಂಞೂ ಏನೀ ಕಪರೀ ॥ ೨ ॥

**ಸಲೋಕ ವಾರಾಂ ತೆ ವಧೀಕ.**

## ಗುರು ಕೇ ಗುಣ

(೬೯)

ಸೂ ಗುರು ಕರಉ ಜಿ ಸಾಚು ದೃಡಾವೈ ॥ ಅಕಥು ಕಥಾವೈ ಸಬದಿ ಮಿಲಾವೈ ॥
ಹರಿ ಕೇ ಲೋಗ ಅವರ ನಹೀ ಕಾರಾ ॥ ಸಾಚಉ ಠಾಕರು ಸಾಚು ಪಿಆರಾ ॥ ೨ ॥
ತನ ಮಹಿ ಮನೂಆ ಮನ ಮಹಿ ಸಾಚಾ ॥ ಸೋ ಸಾಚಾ ಮಿಲಿ ಸಾಚೆ ರಾಚಾ ॥
ಸೇವಕು ಪ್ರಭ ಕೈ ಲಾಗೈ ಪಾಇ ॥ ಸತಿಗುರು ಪೂರಾ ಮಿಲೈ ಮಿಲಾಇ ॥ ೩ ॥

**ಧನಾಸರೀ ಅಸಟಪದೀ ೪.**

(೭೦)

ಏಕ ಮಹಿ ಸರಬ ಸರಬ ಮಹಿ ಏಕಾ ಏಹ ಸತಿಗುರಿ ದೇಖಿ ದಿಖಾಈ ॥ ೫ ॥
ಜಿನಿ ಕೀಏ ಖಂಡ ಮಂಡಲ ಬ್ರಹಮಂಡಾ ಸೋ ಪ್ರಭು ಲಖಿನು ನ ಜಾಈ ॥ ೬ ॥
ದೀಪಕು ತೆ ದೀಪಕ ಪರಗಾಸಿಆ ತ್ರಿಭವಣ ಜೋತಿ ದಿಖಾಈ ॥ ೭ ॥
ಸಚೈ ತಖತಿ ಸಚ ಮಹಲೀ ಬೈಠೆ ನಿರಭಉ ತಾಡೀಲಾಈ ॥ ೮ ॥

## ಗುರುವಿನ ಆವಶ್ಯಕತೆ

(೬೭)

ಸತ್‌ಗುರುವಿನ ಕೃಪೆಯಿಲ್ಲದೆ ಯಾರೂ ಅವನನ್ನು (ಪರಮಾತ್ಮನನ್ನು) ಎಂದೂ ಪಡೆದಿಲ್ಲ, ಯಾರೂ ಎಂದೂ ಪಡೆದಿಲ್ಲ. ಸತ್‌ಗುರುವಿನಲ್ಲಿ ಅವನು ಸ್ವತಃ ಇರುವವನು, ಗುರು ಅವನನ್ನು ಪ್ರಕಟಗೊಳಿಸಿದನು, ಮತ್ತು ಈ ಮಾತನ್ನು ಸರ್ವರಿಗೂ ತಿಳಿಸಿದನು. ಸತ್‌ಗುರುವಿನ ಜೊತೆಗೆ ಮಿಳನವಾಗುವುದರಿಂದ ಸದಾ ಮುಕ್ತಿ ಸಿಗುವುದು, ಅವನು ಒಳಗಿನಿಂದ ಮೋಹವನ್ನು ಹೋಗಲಾಡಿಸುತ್ತಾನೆ. ಸತ್ಯದಲ್ಲಿ ತಮ್ಮ ಚಿತ್ತವನ್ನು ಇರಿಸಬೇಕೆಂಬುದೇ ಉತ್ತಮ ವಿಚಾರವು, ಹೀಗೆ ಸತ್ಯದಲ್ಲಿ ಚಿತ್ತವನ್ನು ಇರಿಸಿದವರು ಜಗಜೀವನದಾತನನ್ನು ಹೊಂದುವರು.

(೪೬೬)

(೬೮)

ನೀನು ಈಜನ್ನು ಬಲ್ಲವನಾಗಿದ್ದರೂ ಈ ಭವಸಾಗರದ ಜಾಲದಿಂದ ಈಸಿ ಪಾರುಗಂಡ ಕುಶಲ ಈಜುಗಾರರಿಂದ ಈಜುವ ಕರೆಯನ್ನು ಕಲಿತುಕೊ.

(೧೧೪೦)

## ಗುರುವಿನ ಗುಣಗಳು

(೬೯)

ಸತ್ಯದಲ್ಲಿ ನಿಮ್ಮನ್ನು ದೃಢಗೊಳಿಸುವ, ಅಕಥನೀಯ ಕಥೆಯನ್ನು ಹೇಳುವ, ಸತ್ಯನೊಡನೆ ಭೇಟಿಮಾಡಿಸುವ ಗುರುವಿನ ಶಿಷ್ಯರಾಗಿರಿ. ಹರಿಯ ಜನರಿಗೆ ಬೇರಾವ ಕೆಲಸವೂ ಇಲ್ಲ, ನಿಜವಾದ ದೇವನಲ್ಲಿ ಮತ್ತು ಸತ್ಯದಲ್ಲಿ ಅವರಿಗೆ ಪ್ರೇಮವಿರುವುದು. ಅವರು ತನುಮನಗಳಲ್ಲಿ ನಿಜವಾದ ಪ್ರಭುವನ್ನು ನೆಲೆಗೊಳಿಸಿರುವರು. ಸತ್ಯದೊಡನೆ ಬೆರೆತುಕೊಂಡು ಅದರ ರೂಪವನ್ನು ತಾಳುವವರೇ ಸತ್ಯವಂತರು. ಸತ್‌ಗುರುವು ದೊರೆತರೆ ಅವನು ಸೇವಕನನ್ನು ಪ್ರಭುವಿನ ಚರಣಗಳ ಬಳಿಗೆ ಕರೆದುಕೊಂಡು ಹೋಗುವನು, ಪ್ರಭುವಿನ ಸಾಕ್ಷಾತ್ಕಾರ ಮಾಡಿಸುವನು.

(೬೮೬)

(೭೦)

ಒಬ್ಬನಲ್ಲಿ ಸರ್ವವು, ಸರ್ವರಲ್ಲಿ ಒಬ್ಬನು ಇರುವುದನ್ನು ಸದ್ಗುರುವು ನೋಡಿ ತೋರಿಸಿದನು. ಖಂಡ, ಮಂಡಲ, ಬ್ರಹ್ಮಾಂಡಗಳನ್ನು ರಚಿಸಿದ ಪ್ರಭುವು ಅಗೋಚರನು, ಅದೃಶ್ಯನು. ಗುರು ದೀಪದಿಂದ ದೀಪ ಕಾಣುವಂತೆ ಮಾಡಿದನು; ತ್ರಿಭುವನದಲ್ಲಿ ಜ್ಯೋತಿಯನ್ನು ತೋರಿಸಿದನು. ಸತ್ಯದ ಮಹಲಿನಲ್ಲಿ ಸತ್ಯದ ಸಿಂಹಾಸನದ ಮೇಲೆ ನಿರ್ಭಯನು ಕುಳಿತನು. ಗುರುವು ಅವನಲ್ಲಿ ಮನಸ್ಸು ನೆಡುವಂತೆ ಮಾಡಿದನು.

ಮೋಹಿ ಗಇಆ ವೈರಾಗಿ ಜೋಗೀ ಘಟಿ ಘಟಿ ಕಿಂಗುರಿ ವಾಈ ॥ ೯ ॥
ನಾನಕ ಸರಣಿ ಪ್ರಭುಕೀ ಛೂಟೆ ಸತಿಗುರ ಸಚು ಸಖಾಈ ॥ ೧೦ ॥

ರಾಮಕಲೀ ದಖಣೀ.

(೭೧)

ಪುರೆ ಗುರ ತೆ ನಾಮು ಪಾಇಆ ಜಾಇ ॥ ಜೋಗ ಜುಗತಿ ಸಚಿ ರಹೈ ಸಮಾಇ ॥
ಬಾರದ ಮಹಿ ಜೋಗೀ ಭರಮಾಏ ಸನಿಆಸೀ ಛಿಅ ಚಾರಿ ॥
ಗುರ ಕೈ ಸಬದಿ ಜೋ ಮರಿ ಜೀವೈ ಸೋ ಪಾಏ ಮೋಖ ದುಆರು ॥
ಬಿನು ಸಬದೈ ಸಭಿ ದೂಜೈ ಲಾಗೆ ದೇಖಹು ರಿಸೈ ಬೀಚಾರಿ ॥
ನಾನಕ ವಡೆ ಸೇ ವಡಭಾಗೀ ಜಿನಿ ಸಚು ರಖಿಆ ಉರಧಾರಿ ॥ ೩೪ ॥

ರಾಮಕಲೀ ಸಿಧ ಗೋಸಟಿ.

## ಗುರು ಕಾ ಕಾರ್ಯಕ್ರಮು

(೭೨)

ಗುಣವಂತೀ ಗುಣ ವೀಥರೈ ಅವುಗುಣವಂತೀ ಝೂರಿ ॥
ಜೇ ಲೋಡಹಿ ವರು ಕಾಮಣ ನಹ ಮಿಲೀಐ ಪಿರ ಕೂರಿ ॥
ನಾ ಬೇಡೀ ನಾ ತುಲಹಡಾ ನಾ ಪಾಈಐ ಪಿರು ದೂರಿ ॥ ೧ ॥
ಮೇರೆ ಠಾಕುರ ಪೂರೈ ತಖತಿ ಅಡೋಲು ॥
ಗುರುಮುಖಿ ಪೂರಾ ಜೇ ಕರೇ ಪಾಈಐ ಸಾಚು ಅತೋಲು ॥ ೧ ॥ ರಹಾಉ ॥
ಪ್ರಭು ಹರಿಮಂದರು ಸೋಹಣಾ ತಿಸು ಮಹಿ ಮಾಣಕ ಲಾಲ ॥
ಮೋತೀ ಹೀರಾ ನಿರಮಲಾ ಕಂಚನ ಕೋಟ ರೀಸಾಲ ॥
ಬಿನು ಪಉಡೀ ಗಡಿ ಕಿಉ ಚಡಉ ಗುರು ಹರಿ ಧಿಆನ ನಿಹಾಲ ॥ ೨ ॥
ಗುರ ಪಉಡೀ ಬೇಡೀ ಗುರು ಗುರು ತುಲಹಾ ಹರಿನಾಉ ॥
ಗುರು ಗುರು ಸಾಗರು ಬೋಹಿಥೋ ಗುರು ತೀರಥ ದರೀಆಉ ॥
ತೇ ತಿಸು ಭಾವೈ ಊಜಲೀ ಸತಸರಿ ನಾವಣು ಜಾಉ ॥ ೩ ॥
ಪೂರೌ ಪೂರೌ ಆಖೀಐ ಪೂರೈ ತಖತಿ ನಿವಾಸ ॥
ಪೂರೈ ಥಾನಿ ಸುಹಾವಣೈ ಪೂರೈ ಆಸ ನಿರಾಸ ॥
ನಾನಕ ಪೂರಾ ಜೇ ಮಿಲೈ ಕಿಉ ಘಾಟೈ ಗುಣತಾಸ ॥ ೪ ॥ ೯ ॥

ಸಿರೀರಾಗು.



 

ಮೋಹವು ಹೋಯಿತು, ಯೋಗಿ ಬೈರಾಗಿಯಾದನು, ಪ್ರತಿಯೊಂದು ಶರೀರದಲ್ಲೂ ಅವನ ಸಾರಂಗಿ ಬಾರಿಸತೊಡಗಿತು. ಪ್ರಭುವಿಗೆ ಶರಣು. ಸದ್‌ಗುರುವಿನಿಂದಾಗಿ ಮುಕ್ತಿ ದೊರೆಯಿತು, ಆದ್ದರಿಂದ ಸದ್ಗುರುವೇ ನಿಜವಾದ ಮಿತ್ರ ಎಂದು ನಾನಕನು ಹೇಳುತ್ತಾನೆ.

(೬೦೭)

(೭೧)

ಪೂರ್ಣ ಗುರುವಿನಿಂದಲೇ ನಾಮವು ದೊರೆಯುವುದು. ಸತ್ಯದಲ್ಲಿ ಲೀನವಾಗಿ ಹೋಗುವುದೇ ಯೋಗದ ಯುಕ್ತಿ. ಯೋಗಿ ಹನ್ನೆರಡು ದಾರಿಗಳಲ್ಲಿ ಅಲೆಯುತ್ತಿರುವನು, ಸನ್ಯಾಸಿಯು ನಾಲ್ಕಾರು ದಾರಿಗಳಲ್ಲಿ. ಯಾರು ಗುರುವಿನ ಶಬ್ದದ ಮುಖಾಂತರ ಅಹಂಕಾರದ ನಾಶಮಾಡಿ ಜೀವಿಸುವರೋ ಅವರಿಗೆ ಮೋಕ್ಷದ ದ್ವಾರವು ಸಿಗುವುದು. ಶಬ್ದ ಪಡೆಯದಿದ್ದುದರಿಂದ ಸರ್ವರೂ ದ್ವೈತಭಾವದಲ್ಲಿ ಮುಳುಗಿರುವರು; ಹೃದಯದಲ್ಲಿ ವಿಚಾರಮಾಡಿ ನೋಡಿರಿ. ಯಾರು ಹೃದಯದಲ್ಲಿ ಸತ್ಯವನ್ನು ಧಾರಣಮಾಡಿಕೊಂಡಿರುವರೋ ಅವರೇ ಮಹಾಭಾಗ್ಯವಂತರೆಂದು ನಾನಕನು ಹೇಳುತ್ತಾನೆ.

(೯೪೧–೪೨)

## ಗುರುವಿನ ಕಾರ್ಯಕ್ರಮ

(೭೨)

ಗುಣವತಿಯಾದವಳು ಪ್ರಿಯನ ಗುಣಗಳನ್ನು ವಿಸ್ತರಿಸುವಳು, ಅವಗುಣವತಿಯಿಂದ ದೂರವಿರುವಳು. ಕಾಮಿನಿಯೆ, ನಿನ್ನ ಪ್ರಿಯನನ್ನು ನೀನು ಪಡೆಯಬೇಕೆನ್ನುವೆಯಾದರೆ ಅವನು ಅನ್ಯತದಿಂದ ಸಿಗುವುದಿಲ್ಲೆಂದು ಅರಿತುಕೋ. ಪ್ರಿಯನು ದೂರ ಆಚೆಗಿರುವನು; ನಿನ್ನ ಹತ್ತಿರ ನಾವೆ ಇಲ್ಲ; ಅವನ ಹತ್ತಿರ ಹೇಗೆ ಹೋಗಬಲ್ಲೆ? ನನ್ನ ದೇವರು ತನ್ನ ಅಚಲ ಸಿಂಹಾಸನದ ಮೇಲೆ ಕುಳಿತಿರುವನು. ಯಾವನಾದರೂ ಗುರು ಮುಖಿನು ನನ್ನನ್ನು ಪೂರ್ಣಗೊಳಿಸಿದರೆ ಆ ಅತುಲನೀಯ ಸತ್ಯನ ಸಾಕ್ಷಾತ್ಕಾರವಾಗುವುದು. ಅನೇಕ ಮಾಣಿಕ ಮುತ್ತುಗಳು ತುಂಬಿರುವ ಹರಿ ಮಂದಿರದಂತೆ ಪ್ರಭು ಸುಂದರನು. ಪ್ರಭು ಮುತ್ತು, ವಜ್ರ ಮತ್ತು ನಿರ್ಮಲ ಕಾಂಚನದಿಂದ ಮಾಡಿದ ಸುಂದರ ದುರ್ಗ. ಮೆಟ್ಟಿಲುಗಳಿಲ್ಲದೆ, ಆ ದುರ್ಗದ ಮೇಲೆ ಹೇಗೆ ಏರಿ ಹೋಗಬಲ್ಲೆ? ಗುರು ಹರಿಯ ಧ್ಯಾನದಲ್ಲಿರುವನು, ಅವನ ಮುಖಾಂತರವಾಗಿಯೆ ನೀನು ದುರ್ಗದ ಮೇಲೆ ಏರಿಹೋಗಬಲ್ಲೆ. ಗುರುವೇ ಮೆಟ್ಟಿಲು, ಗುರುವೇ ನಾವೆ, ಗುರುವೇ ಹರಿನಾಮದಿಂದ ತುಂಬಿದ ದೋಣಿ. ಗುರುವು ಈ ಮಹಾಸಾಗರದ ಹಡಗು; ಈ ನದಿಯ ತೀರದಲ್ಲಿ ಗುರುವೇ ತೀರ್ಥ-ಸ್ಥಾನ. ಅವನ ಕೃಪೆಯಿಂದ ಈ ಸತ್ಯ ಸರಿತೆಯಲ್ಲಿ ಮಿಂದು ಉಜ್ವಲವಾಗು. ಯಾರಿಗೆ ಪೂರ್ಣಾತಿ-ಪೂರ್ಣನೆಂದು ಹೇಳುವರೊ ಅವನು ಪೂರ್ಣ ಸಿಂಹಾಸನದ ಮೇಲೆ ವಾಸಿಸುವನು. ಆ ಸ್ಥಾನವು ಪೂರ್ಣವೂ ಸುಂದರವೂ ಆಗಿರುವದು; ಅಲ್ಲಿ ನಿರಾಶನ ಆಸೆ ಪೂರ್ಣವಾಗುವುದು. ಆ ಪೂರ್ಣನು ದೊರೆತಲ್ಲಿ ಗುಣಗಳ ಖಜಾನೆ ಏಕೆ ಕಡಿಮೆಯಾಗುವುದು ಎಂದು ನಾನಕನು ಕೇಳುತ್ತಾನೆ.

(೧೭)

(೭೩)
ಅಮ್ರಿತು ನೀರು ಗಿಆನಿ ಮನ ಮಜನು ಅಡಸಠಿ ತೀರಥ ಸಂಗಿ ಗಹೆ ॥
ಗುರು ಉಪದೇಸಿ ಜವಾಹರ ಮಾಣಕ ಸೇವೆ ಸಿಖು ಸೋ ಖೋಜಿ ಲಹೈ ॥
ಗುರ ಸಮಾನಿ ತೀರಥ ನಹೀ ಕೋಇ ॥ ಸರು ಸಂತೋಖು ತಾಸು ಗುರು ಹೋಇ ರಹಾಉ ॥ ೧ ॥
ಗುರು ದರಿಆಉ ಸದಾ ಜಲು ನಿರಮಲು ಮಿಲಿಆ ದುರಮತಿ ಮೈಲು ಹರೈ ॥
ಸತಿಗುರಿ ಪಾಇಐ ಪೂರಾ ನಾವಣು ಪಸೂ ಪರೇತಹು ದೇವ ಕರೈ ॥ ೨ ॥
ರತಾ ಸಚಿ ನಾಮಿ ತಲ ಹೀಅಲು ಸೋ ಗುರು ಪರಮಲು ಕಹೀಐ ॥
ಜಾಕೀ ವಾಸು ಬನಾಸಪತಿ ಸಉರೈ ತಾಸು ಚರಣ ಲಿವ ರಹೀಐ ॥ ೩ ॥
ಗುರಮುಖಿ ಜೀಅ ಪ್ರಾನ ಉಪಜಹಿ ಗುರುಮುಖಿ ಸಿವ ಘರಿ ಜಾಈಐ ॥
ಗುರಮುಖಿ ನಾನಕ ಸಚಿ ಸಮಾಈಐ ಗುರಮುಖಿ ನಿಜ ಪದು ಪಾಈಐ ॥ ೪ ॥ ೬ ॥

ಪ್ರಭಾತೀ.

## ಗುರು ಕೀ ಶರಣ ಮೆ ಜಾನೇ ಕಾ ಫಲ

(೭೪)
ಗೃಹು ಬನು ಸಮಸರಿ ಸಹಜಿ ಸುಭಾಈ ॥ ದುರಮತಿ ಗತು ಭಈ ಕೀರತಿ ಠಾಇ ॥
ಸಚ ಪಉಡೀ ಸಾಚಉ ಮುಖಿ ನಾಉ ॥ ಸತಿಗುರು ಸೇವಿ ಪಾಏ ನಿಜ ಥಾಉ ॥ ೧ ॥
ಮನ ಚೂರೆ ಖಟು ದರಸನ ಜಾಣು ॥ ಸರಬ ಜೋತಿ ಪೂರನ ಭಗವಾನು ॥ ೧ ॥ ರಹಾಉ ॥
ಅಧಿಕ ತಿಆಸ ಭೇಖ ಬಹು ಕರೈ ॥ ದುಖು ಬಿಖಿಆ ಸುಖು ತನಿ ಪರಹರೈ ॥
ಕಾಮು ಕ್ರೋಧು ಅಂತರಿ ಧನ ಹಿರೈ ॥ ದುವಿಧಾ ಛಾಡಿ ನಾಮಿ ನಿಸತರೆ ॥ ೨ ॥
ಸಿಫತಿ ಸಲಾಹಣು ಸಹಜ ಆನಂದ ॥ ಸಖಾ ಸೈನು ಪ್ರೇಮು ಗೋವಿಂದ ॥
ಆಪೆ ಕರೆ ಆಪೆ ಬಖಸಿಂದು ॥ ತನು ಮನು ಹರಿ ಪಹಿ ಆಗೈ ಜಿಂದು ॥ ೩ ॥
ಝೂಠ ವಿಕಾರ ಮಹಾ ದುಖು ದೇಹ ॥ ಭೇಖ ವರನ ದೀಸಹಿ ಸಭಿ ಖೇಹ ॥
ಜೋ ಉಪಜೈ ಸೋ ಆವೈ ಜಾಇ ॥ ನಾನಕ ಅಸಥಿರು ನಾಮು ರಜಾಇ ॥ ೪ ॥ ೧೧ ॥

ಆಸಾ.

(೭೫)
ನಾನಕ ಗುರು ಸಂತೋಖು ರುಖು ಧರಮು ಫುಲು ಫಲು ಗಿಆನು ॥
ರಸಿ ರಸಿಆ ಹರಿಆ ಸದಾ ಪಕೈ ಕರಮಿ ಧಿಆನಿ ॥
ಪತಿ ಕೆ ಸಾದ ಖಾದಾ ಲಹೈ ದಾನಾ ಕೈ ಸಿರಿ ದಾನು ॥ ೧ ॥ ಮಂ ೧ ॥
ಸುಇನೆ ಕಾ ಬಿರಖು ಪತ ಪರವಾಲಾ ಫುಲ ಜವೇಹರ ಲಾಲ ॥
ತಿತು ಫಲ ರತನ ಲಗಹಿ ಮುಖಿ ಭಾಖಿತ ಹಿರದೈ ರಿದೈ ನಿಹಾಲು ॥

(೭೩)

ಜ್ಞಾನವೆಂಬ ಅಮೃತ ಜಲದಲ್ಲಿ ಮನವು ಸ್ನಾನಮಾಡುವುದು, ಈ ಜಲದಲ್ಲಿರುವದು ಅರವತ್ತೆಂಟು ತೀರ್ಥಗಳ ಸಂಗಮವು. ಗುರುವಿನ ಉಪದೇಶವು ವಜ್ರ—ಮಾಣಿಕಕ್ಕೆ ಸಮಾನ. ಅವನ ಸೇವೆ ಮಾಡುವ ಶಿಷ್ಯನಿಗೆ ಹುಡುಕಿದರೆ ಅದು ದೊರೆಯುವುದು. ಗುರುವಿಗೆ ಸಮಾನವಾದ ತೀರ್ಥವಿಲ್ಲ, ಗುರುವು ಸಂತೋಷದ ಸರೋವರ. ಸದಾ ನಿರ್ಮಲವಾಗಿರುವ ನದಿಯೆ ಗುರು; ಅವನನ್ನು ಸೇರುವುದರಿಂದ ದುರ್ಮತಿಯ ಹೊಲಸು ಕಳೆದು ಹೋಗುವುದು. ಸದ್ಗುರುವಿನ ಮಿಳನವೇ ಪೂರ್ಣ ಸ್ನಾನ; ಅವನು ಪಶುವನ್ನೂ ಪಿಶಾಚಿಯನ್ನೂ ದೇವತೆಯಾಗಿ ಮಾಡುವನು. ಗುರುವು ಗಹನ ಮನದಿಂದ ನಾಮದಲ್ಲಿ ತಲ್ಲೀನನಾಗಿರುವನು. ಗುರುವಿಗೆ ಪರಿಮಳವೆನ್ನುವರು. ಅವನ ಸುಗಂಧದಿಂದ ವನಸ್ಪತಿಗಳು ಸುಗಂಧಿಗಳಾಗುವವು; ಅವನ ಚರಣದಲ್ಲಿ ಧ್ಯಾನ ಮಗ್ನರಾಗಿರಿ. ಗುರುವಿನ ಮುಖಾಂತರವಾಗಿ ಜೀವದಲ್ಲಿ ಪುನಃ ಪ್ರಾಣಸಂಚಾರವಾಗುವುದು; ಗುರುವಿನ ಮುಖಾಂತರವೇ ಶಿವಗೃಹದಲ್ಲಿ ಪ್ರವೇಶವು ಸಿಗುವುದು. ಗುರುವಿನ ಮುಖಾಂತರವೇ ಸತ್ಯದಲ್ಲಿ ಸಮಾವೇಶವಾಗುವುದು; ಗುರುವಿನ ಮುಖಾಂತರವೇ ನಿಜಪದದ ಪ್ರಾಪ್ತಿಯಾಗುವುದು.

(೧೩೨೮–೨೯)

## ಗುರುವಿಗೆ ಶರಣುಹೋಗುವುದರಿಂದ ದೊರೆಯುವ ಫಲ

(೭೪)

ಅವನಿಗೆ ಮನೆ ಮತ್ತು ವನ ಎರಡೂ ಸಹಜ, ಸಮಾನ; ದುರ್ಮತಿ ಕಳೆದ ಬಳಿಕ ಪ್ರಭುವಿನ ಕೀರ್ತಿಯಲ್ಲಿ ಮನಸ್ಸು ನಿಂತುಬಿಡುವುದು. ಅವನಿಗೆ ಸತ್ಯದ್ದೇ ನಿಚ್ಚಣಿಕೆ; ಸತ್ಯನಾಮವೇ ಅವನ ಬಾಯಿಯಲ್ಲಿ; ಸತ್ ಗುರುವಿನ ಸೇವೆಯಿಂದ ನಿಜಸ್ಥಾನವು ಅವನಿಗೆ ಸಿಗುವುದು. ಮನವನ್ನು ವಶದಲ್ಲಿರಿಸಿಕೊಂಡರೆ ಷಡದರ್ಶನದ ಜ್ಞಾನವಾಯಿತೆಂದು ತಿಳಿಯಿರಿ; ಸರ್ವಜ್ಯೋತಿಪೂರ್ಣನಾಗಿರುವವನು ಭಗವಂತನು. ಬಹುವೇಷ ಧಾರಣೆಯಿಂದ ತೃಷ್ಣೆ ಹೆಚ್ಚುವುದು; ವಿಷಯಗಳಿಂದ ದುಃಖ ಉಂಟಾಗಿ, ಸುಖವು ಶರೀರವನ್ನು ಬಿಟ್ಟು ತೊಲಗುವುದು. ಕಾಮ ಕ್ರೋಧಗಳು ಅಂತರಂಗದಲ್ಲಿ ಇರುವ ಧನವನ್ನು ಹರಣ ಮಾಡುವವು; ಇಬ್ಬಗೆಯನ್ನು ತೊರೆದು ನಾಮಸ್ಮರಣೆ ಮಾಡಿದರೆ ಭವಸಾಗರವನ್ನು ದಾಟುವನು. ಪ್ರಭುವಿನ ಗುಣಗಾನದಿಂದ ಸಹಜವಾದ ಆನಂದವು ಸಿಕ್ಕುವುದು; ಪ್ರಭುವಿನ ಪ್ರೀತಿಯೆ ಸಖನಾಗುವುದು, ಸಂಬಂಧಿಕನಾಗುವುದು. ನಮಗೆ ಜನ್ಮವಿತ್ತವನೇ ಕೃಪೆತೋರುವನು, ನನ್ನ ತನುಮನ ಹರಿಗೆ ಅರ್ಪಿತ. ಅವನೆದುರಿನಲ್ಲಿಯೆ ಪ್ರಾಣಗಳನ್ನಿರಿಸಿದ್ದೇನೆ. ಅಸತ್ಯ ಹಾಗೂ ವಿಷಯಾಸಕ್ತಿಗಳು ದೇಹಕ್ಕೆ ಬಹಳ ದುಃಖವೀಯುವವು; ವೇಷ ಮತ್ತು ವರ್ಣಗಳು ವ್ಯರ್ಥವಾಗಿ ತೋರುವುವು. ಹುಟ್ಟಿದುದು ಬರುವುದು, ಹೋಗುವುದು; ಯಾವನು ನಾಮದ ಸ್ಮರಣೆಯಲ್ಲಿರುವನೋ ಅವನು ಸ್ಥಿರವಾಗಿರುವನೆಂದು ನಾನಕನು ಹೇಳುತ್ತಾನೆ.

(೩೫೧–೫೨)

(೭೫)

ನಾನಕನು ಹೇಳುವುದೇನೆಂದರೆ ಗುರು ಸಂತೋಷ ವೃಕ್ಷ, ಧರ್ಮವು ಹೂವು, ಜ್ಞಾನವು ಫಲ. ಅದು ಸದಾ ಹಚ್ಚ ಹಸಿರು, ರಸಪೂರ್ಣವಾದುದು; ಕರ್ಮ ಮತ್ತು ಧ್ಯಾನದಿಂದ ಈ ಫಲವು ಪಕ್ವವಾಗುವುದು. ಇದನ್ನು ತಿಂದವನು ಪತಿಯ ಸಂಯೋಗದಿಂದ ಸತಿಗೆ ಆಗುವ ಸಂತೋಷವನ್ನು ಪಡೆಯುವನು; ಗುರುವಿನ ಈ ದಾನವೇ ಸರ್ವೋತ್ತಮ ದಾನವು. ಗುರುವು ಸುವರ್ಣ ವೃಕ್ಷವಾಗಿರುವನು; ಪಚ್ಚೆಗಳು ಅದರ ಎಲೆಗಳು; ವಜ್ರಗಳು ಮುತ್ತು ಮಾಣಿಕಗಳು ಅದರ ಹೂವುಗಳು; ಅದಕ್ಕೆ ರತ್ನಫಲಗಳು. ಗುರುವಿನ ಹರಿ-ಮುಖದಿಂದ ಹೊರಟ ಮಾತುಗಳು ಹೃದಯವನ್ನು ಹರಿಗೆ ಪ್ರಸನ್ನವಾಗುವಂತೆ ಮಾಡುವವು. ನಾನಕನು

ನಾನಕ ಕರಮು ಹೋವೈ ಮುಖಿ ಮಸತಕಿ ಲಿಖಿಆ ಹೋವೈ ಲೇಖು ॥
ಅಡಸಠಿ ತೀರಥ ಗುರ ಕೀ ಚರಣೀ ಪೂಜೈ ಸದಾ ವಿಸೇಖು ॥
ಹಂಸು ಹೇತು ಲೋಭು, ಕೋಪು ಚಾರೆ ನದೀಆ ಅಗಿ ॥
ಪವಹಿ ದಝಹಿ ನಾನಕಾ ತರೀಐ ಕರಮೀ ಲಗಿ ॥ ೨ ॥

**ಪಾರ ಮಾಝು ಪಉಡೀ ೨೦. ಸಲೋಕ ೧, ೨.**

(೭೬)

ಸತಿಗುರ ವಿಟಹು ವಾರಿಆ ಜಿತು ಮಿಲಿಐ ಖಸಮು ಸಮಾಲಿಆ ॥
ಜಿನಿ ಕರಿ ಉಪದೇಸು ಗಿಆನ ಅಂಜನು ದೀಆ ಇನ್ಹೀ ನೇತ್ರೀ ಜಗತು ನಿಹಾಲಿಯಾ ॥
ಖಸಮು ಛೋಡಿ ದೂಜೈ ಲಗೆ ಡುಬಿ ಸೆ ವಣಜಾರಿಆ ॥
ಸತಿಗುರು ಹೈ ಬೋಹಿಥಾ ವಿರಲೈ ಕಿನೈ ವೀಚಾರಿಯಾ ॥
ಕರಿ ಕಿರಪಾ ಪಾರಿ ಉತಾರಿಆ ॥ ೧೩ ॥

**ವಾರ ಆಸಾ ಪಉಡೀ ೧೩.**

(೭೭)

ಸಚಾ ಸತಿಗುರು ಸೇವಿ ಸಚು ಸಮ್ಹಾಲಿಆ ॥ ಅಂತಿ ಚಲೋಆ ಆಇ ಜಿ ಸತಿಗುರ ಅಗ್ಗೈ ಘಾಲಿಆ ॥
ಪೋಹಿ ನ ಸಕೈ ಜಮಕಾಲು ಸಚಾ ರಖವಾಲಿಆ ॥ ಗುರ ಸಾಖೀ ಜೋತಿ ಜಗಾಇ ದೀವಾ ಬಾಲಿಆ ॥
ಮನಮುಖ ವಿಣು ನಾವೈ ಕೂಡಿಆರ ಫಿರಹಿ ಬೇತಾಲಿಆ ॥ ಪಸೂ ಮಾಣಸ ಚಂಮಿ ಪಲೇಟೆ
ಅಂದರಹು ಕಾಲಿಆ ॥
ಸಭೂ ವರತೈ ಸಚು ಸಚೈ ಸಬದಿ ನಿಹಾಲಿಆ ॥ ನಾನಕ ನಾಮು ನಿಧಾನು ಹೈ ಪೂರೈ
ಗುರಿ ದೇಖಾಲಿಆ ॥ ೧೪ ॥

**ವಾರ ಮಲಾರ ಪಉಡೀ, ೧೪.**

## ಶಬ್ದ ಕೇ ದ್ವಾರಾ ಹೀ ಗುರೂ ಸಿಖ ಕೋ ಸಂವಾರತಾ ಹೈ

(೭೮)

ಗುರಮುಖಿ ನಾದಂ ಗುರಮುಖಿ ವೇದಂ ಗುರಮುಖಿ ರಹಿಆ ಸಮಾಈ ॥
ಗುರು ಈಸರು ಗುರು ಗೋರಖು ಬರಮಾ ಗುರು ಪಾರಬತೀ ಮಾಈ ॥
ಜೇ ಹಉ ಜಾಣಾ ಆಖಾ ನಾಹೀ ಕಹಣಾ ಕಥನು ನ ಜಾಈ ॥
ಗುರು ಇಕ ದೇಹಿ ಬುಝಾಈ ॥ ಸಭಣಾ ಜೀಆ ಕಾ ಇಕು ದಾತಾ ಸೋ ಮೈ ವಿಸರಿ ನ ಜಾಈ
॥ ೫ ॥

**ಜಪು ಪಉಡೀ ೫.**

(೭೯)

ಸತಿಗುರ ಸಬದಿ ಪಾಧರು ಜಾಣಿ ॥ ಗುರು ಕೈ ತಕೀಐ ಸಾಚೈ ತಾಣಿ ॥
ನಾಮು ಸಮ್ಹಾಲಸಿ ರೂಡಿ ಬಾಣಿ ॥ ಥೈ ಭಾವೈ ದರು ಲಹಸಿ ಪಿರಾಣಿ ॥ ೨ ॥

ಹೇಳುವುದೇನೆಂದರೆ—ಅವನ ಕೃಪೆಯಾದರೆ ಮತ್ತು ಹಣೆಯಲ್ಲಿ ಉತ್ತಮ ಭಾಗ್ಯರೇಖೆಯಿದ್ದರೆ ಗುರುಚರಣಗಳಲ್ಲಿಯೆ ಅರವತ್ತೆಂಟು ತೀರ್ಥಗಳು ದೊರೆಯುವವು; ವ್ಯಕ್ತಿ ಅವನ್ನು ವಿಶೇಷವೆಂದು ಬಗೆದು ಪೂಜಿಸುವನು. ಹಿಂಸೆ, ಮೋಹ, ಲೋಭ, ಕ್ರೋಧ ಇವು ನಾಲ್ಕು ಬೆಂಕಿಯ ನದಿಗಳು. ಇವುಗಳಲ್ಲಿ ಮುಳುಗಿದವನು ಸುಟ್ಟು ಹೋಗುವನು; ಗುರುವಿನ ಕೃಪೆಯಾದರೆ ಇವನ್ನು ಈಸಿ ಪಾರಾಗುವನು ಎಂದು ನಾನಕನು ಹೇಳುತ್ತಾನೆ

(೧೪೭)

(೭೬)

ಯಾರ ಭೇಟ್ಟಿಯಾದ್ದರಿಂದ ನನಗೆ ಸ್ವಾಮಿಯ ಸ್ಮರಣೆ ಬಂದಿತೊ ಆ ಸದ್ಗುರುವಿಗೆ ನಾನು ಸಮರ್ಪಿತನು. ಅವನು ಉಪದೇಶ ಮಾಡಿ ಜ್ಞಾನಾಂಜನವನ್ನು ಕೊಟ್ಟನು, ಆ ಅಂಜನವನ್ನು ಹಚ್ಚಿಕೊಂಡು ಈ ಜಗವನ್ನು ನೋಡಿದೆನು. ಯಾರೇ ಆಗಲಿ, ಸ್ವಾಮಿಯನ್ನು ಬಿಟ್ಟು ಇನ್ನೊಬ್ಬರಲ್ಲಿ ಪ್ರೀತಿ ತೋರಿದರೆ ಅವನು ಅವಶ್ಯವಾಗಿ ಮುಳುಗುವನು. ಅವನೆಂಥ ವ್ಯಾಪಾರಿ? ಗುರು ಒಂದು ನೌಕೆ; ಈ ವಿಚಾರವು ಹೊಳೆಯುವುದು ಅಪರೂಪವಾಗಿ. ಅವನು ತನ್ನ ಕೃಪೆಯಿಂದ ಭವಸಾಗರದಿಂದ ಪಾರುಗಾಣಿಸುವನು.

(೪೭೦)

(೭೭)

ಸದ್ಗುರುವಿನ ಸೇವೆಯಿಂದ ನನಗೆ ಸತ್ಯದ ಜ್ಞಾನವಾಯಿತು. ಗುರುವಿನ ಎದುರಿಗೆ ನಾನು ಮಾಡಿದ ಎಲ್ಲ ಶ್ರಮದಲ್ಲಿ ಅವನೇ ನನಗೆ ಸಹಾಯಮಾಡಿದನು. ಸತ್ಯವೇ ನನ್ನ ರಕ್ಷಕ. ನನ್ನ ಮೇಲೆ ಇನ್ನು ಯಮಕಾಲದ ಪ್ರಭಾವವೇನೂ ಉಂಟಾಗದು. ಗುರುವಿನ ಶಿಕ್ಷಣದಿಂದ ನಾನು ಜ್ಯೋತಿಯನ್ನು ಉಜ್ವಲಗೊಳಿಸಿಕೊಂಡು ದೀಪವನ್ನು ಹೊತ್ತಿಸಿಕೊಂಡಿರುವೆನು. ಮನಮುಖರು ಅಸತ್ಯವಂತರು; ನಾಮವಿಹೀನರು ಪಿಶಾಚಿಯಂತೆ ತಿರುಗುವವರು, ಅವರು ಮಾನವ ಚರ್ಮದಿಂದ ಆವೃತರಾದ ಪಶುಗಳು, ಅಂತರಂಗದಲ್ಲಿ ಕಪ್ಪಾಗಿರುವವರು. ಸತ್ಯವು ಸರ್ವತ್ರ ವ್ಯಾಪ್ತವಾಗಿರುವುದು; ಶಬ್ದದ ಮುಖಾಂತರ ನಾನು ಇದನ್ನು ಕಂಡಿರುವೆನು. ನಾಮವೇ ನಿಧಿ, ಪೂರ್ಣ ಗುರು ಈ ನಿಧಿಯನ್ನು ನನಗೆ ತೋರಿಸಿರುವನು ಎಂದು ನಾನಕನು ಹೇಳುತ್ತಾನೆ.

(೧೨೮೪)

## ಶಬ್ದದ ಮುಖಾಂತರವಾಗಿಯೆ ಗುರುವು ಶಿಷ್ಯನನ್ನು ತಿದ್ದುವನು

(೭೮)

ಗುರು ಎಂಬ ಶಬ್ದವೇ ನಾದವು, ಗುರು ಶಬ್ದವೇ ವೇದವು; ಗುರುವಿನ ಶಬ್ದದಲ್ಲಿಯೆ ಅವನು ಸಮಾವಿಷ್ಟನು. ಗುರುವೇ ಶಿವನು, ಗೋರಖನು, ಬ್ರಹ್ಮನು, ಗುರುವೇ ಪಾರ್ವತಿಮಾತೆ. ನಾನು ಅವನನ್ನು ಅರಿತಿರುವೆನಾದರೂ ಅವನನ್ನು ಕುರಿತು ಏನೂ ಹೇಳಲು ಅಸಮರ್ಥನು; ಅವನ ಗುಣಗಾನವು ವಾಣಿಗೆ ಮೀರಿದುದು. ಓ ಗುರುವೆ, ಆ ಒಬ್ಬನ, ಸರ್ವ ಜೀವಿಗಳಲ್ಲಿರುವ ಆ ದಾತನ ಜ್ಞಾನವನ್ನು ಕೊಡು; ಅವನನ್ನು ನಾನೆಂದಿಗೂ ಮರೆಯದಂತೆ ಕರುಣಿಸು.

(೨)

(೭೯)

ಸದ್ಗುರುವಿನ ಶಬ್ದದಿಂದ ಮಾರ್ಗವನ್ನು ಅರಿತುಕೊ, ಗುರುವನ್ನು ಅವಲಂಬಿಸುವುದರಿಂದ ಸತ್ಯದ ಶಕ್ತಿಯು ಸಿಗುವುದು. ಸುಂದರವಾಣಿಯಿಂದ ನಾಮಸ್ಮರಣೆ ಮಾಡು. ನಿನ್ನ ಇಚ್ಛೆಯಿಂದಲೇ ಪ್ರಾಣಿಗೆ ದ್ವಾರದ

ಉಂಡಾ ವೈಸಾ ಏಕ ಅವತಾರ ॥ ಗುರ ಕೈ ಸಬದಿ ನಾಮ ಅಧಾರ ॥
ನಾ ಜಲು ಡೂಂಗರು ನ ಊಚೀ ಧಾರ ॥ ನಿಜ ಘರಿ ವಾಸಾ ತಹ ಮಗು ನ ಚಾಲಣಹಾರ ॥ ೩ ॥
ಜಿತು ಘರಿ ವಸಹಿ ತೂಹೈ ಬಿಧಿ ಜಾಣಹಿ ಬೀಜಉ ಮಹಲು ನ ಜಾಪೈ ॥
ಸತಿಗುರ ಬಾಝಹು ಸಮಝು ನ ಹೋವೀ ಸಭು ಜಗು ದಬಿಆ ಛಾಪೈ ॥
ಕರಣ ಪಲಾವ ಕರೈ ಬಿಲಲಾವಉ ಬಿನು ಗುರ ನಾಮು ನ ಜಾಪೈ ॥
ಪಲ ಪಂಕಜ ಮಹಿ ನಾಮು ಛಡಾಏ ಜೇ ಗುರ ಸಬದು ಸಿಞಾಪೈ ॥ ೪ ॥
ಇಕಿ ಮೂರಖ ಅಂಧೇ ಮುಗಧ ಗವಾರ ॥ ಇಕಿ ಸತಿಗುರ ಕೈಭೈ ನಾಮ ಆಧಾರ ॥
ಸಾಚೀ ವಾಣಿ ಮೀಠೀ ಅಮೃತ ಧಾರ ॥ ಜಿನಿ ಪೀತಿ ತಿಸು ಮೋಖದುಆರ ॥ ೫ ॥
ನಾಮು ಭೈ ಭಾಇ ರಿದೈ ಬಸಾಹೀ ಗುರ ಕರಣೀ ಸಚು ಬಾಣೀ ॥
ಇಂದು ಬರಸೈ ಧರತಿ ಸುಹಾವೀ ಘಟಿ ಘಟಿ ಜೋತಿ ಸಮಾಣೀ ॥
ಕಾಲರಿ ಬೀಜಸಿ ದುರಮತಿ ಐಸೀ ನಿಗುರೆ ಕೀ ನೀಸಾಣೀ ॥
ಸತಿಗುರ ಬಾಝಹು ಘೋರ ಅಂಧಾರಾ ಡೂಬಿ ಮುಏ ಬಿನು ಪಾಣಿ ॥ ೬ ॥

**ಮಲಾರ ಅಸಟಪದೀ ಆ.**

## ಗುರುಶಬ್ದ ಹೀ ಗುರು ಹೈ

(೮೦)
ಸಬದು ಗುರ ಪೀರಾ ಗಹಿರ ಗಂಭೀರಾ ಬಿನು ಸಬದೈ ಜಗು ಬಉರಾನಂ ॥
ಪೂರಾ ಬೈರಾಗೀ ಸಹಜಿ ಸುಭಾಗೀ ಸಚು ನಾನಕ ಮನು ಮಾನಂ ॥ ೮ ॥ ೧ ॥

**ಸೋರಠ ಅಸಟಪದೀಆ.**

(೮೧)
ಭನತಿ ನಾನಕು ಕರೆ ವೀಚಾರು ॥ ಸಾಚಿ ಬಾಣೀ ಸಿಉ ಧರೆ ಪಿಆರು ॥
ತಾ ಕೋ ಪಾವೈ ಮೋಖ ದುಆರು ॥ ಜಪು ತಪು ಸಭು ಇಹು ಸಬದು ಹೈ ಸಾರು ॥ ೫ ॥
॥ ೨ ॥ ೪ ॥

**ಧನಾಸರೀ.**

## ಆರತೀ[1]

(೮೨)
ಗಗನ ಮೈ ಥಾಲು ರವಿ ಚಂದು ದೀಪಕ ಬನೆ ತಾರಿಕಾ ಮಂಡಲ ಜನಕ ಮೋತೀ ॥
ಧೂಪು ಮಲಆನಲೊ ಪವಣು ಚವರೊ ಕರೆ ಸಗಲ ಬನರಾಇ ಫೂಲಂತ ಜೋತೀ ॥ ೧ ॥

---

1. ಗುರು ನಾನಕ ದೇವ ಜಬ ಜಗನ್ನಾಥಕ್ಕೆ ಮಂದಿರ (ಪುರಿ ಉಡಿಸಾ) ಮೆ ಗಯೆ, ಸಂಧ್ಯಾ ಕೇ ಸಮಯ ಪುಜಾರಿಯೊಂ ನೆ ಉನೆ ಜಗನ್ನಾಥ ಮೂರ್ತಿ ಕೀ ಆರತಿ ಮೆ ಶಾಮಿಲ ಹೋನೆಕೆ ಲಿಏ ಕಹಾ. ಏಕ ಥಾಲೀ ಮೆ ದಿಯೆ ಜಲಾ ರಖೆ ಥೆ. ಧೂಪಭೀ ಜಲಾಯಾ ಗಯಾ ಥಾ. ಮೂರ್ತಿ ಪರ ಫೇಂಕನೆ ಕೇಲಿಏ ಫೂಲ ಭೀ ರಖೆ ಹುಏ ಥೆ. ಗುರು ನಾನಕ ದೇವಜೀ ನೆ ಇಸ ಶಬ್ದ ಕೀ ರಚನಾ ಕೀ ಕಿ ಮೇರೆ ಈಶ್ವರ ಕೀ ಆರತೀ ತೋ ಸ್ವಯಮೇವ ಹೋ ರಹೀ ಹೈ.

ಗುರುತು ಸಿಗುವುದು. ಆ ಒಬ್ಬನಲ್ಲಿ ಅಖಂಡ ಪ್ರೀತಿಯಿರಿಸಿದ್ದರೆ ಕುಳಿತುಕೊಂಡಿದ್ದರೂ ನಾನು ಮೇಲಕ್ಕೆ ಹಾರುವೆನು; ಗುರುವಿನ ಮಾತಿನಂತೆ ನಾಮವನ್ನೇ ಆಧಾರವಾಗಿರಿಸಿಕೊಂಡಿರುವೆನು. ನಿಜಗೃಹದಲ್ಲಿದ್ದರೆ ಯಾವ ಮಾರ್ಗದ ಮೇಲೂ ನಡೆಯಬೇಕಾಗುವುದಿಲ್ಲ; ಯಾವ ಅಡ್ಡಿಯೂ ಇಲ್ಲ; ನೀರಿಲ್ಲ; ಪರ್ವತವಿಲ್ಲ; ಉಚ್ಚ ಧಾರೆಯೂ ಇಲ್ಲ. ಯಾವ ಮನೆಯಲ್ಲಿ ನಿನ್ನ ಆವಾಸವಿರುವುದೋ ಅದರ ಸ್ಥಿತಿಯು ನಿನಗೆ ಗೊತ್ತು; ನಿನ್ನ ಹೊರತಾಗಿ ಬೇರೆ ಯಾವ ಆಶ್ರಯವೂ ನನಗೆ ಕಾಣಿಸದು. ಸದ್ಗುರುವಿನ ಕೃಪೆದೊರೆಯದ ಹೊರತು ಇಡೀ ಜಗತ್ತು ಅವಿದ್ಯೆಯ ಕೆಳಗೆ ಹತ್ತಿಕ್ಕಲ್ಪಟ್ಟಿದೆಯೆಂಬುದು ತಿಳಿಯುವುದಿಲ್ಲ. ಕೆಲವರು ಅಳುವರು, ವಿಲಾಪಮಾಡುವರು; ಆದರೆ ಗುರುವಿನ ಹೊರತು ನಾಮದ ಅರಿವು ಆಗುವುದಿಲ್ಲ. ಗುರುವಿನ ಹೊರತು ನಾಮದ ಅರಿವು ಆಗುವುದಿಲ್ಲ. ಗುರುಶಬ್ದದ ಪರಿಚಯವಾದರೆ ನಿಮಿಷಮಾತ್ರದಲ್ಲಿ ನಾಮವು ಮುಕ್ತಿಯನ್ನು ದೊರಕಿಸಿಕೊಡುವುದು. ಕೆಲವರು ಕುರುಡರು ಮುಗ್ಧರು, ಮೂಢರು ಇರುವರು; ಕೆಲವರು ಸದ್ಗುರುವಿನ ಭಯದಲ್ಲಿರುವರು. ಅವರಿಗೆ ನಾಮವೇ ಆಧಾರ, ಗುರುವಿನ ಸತ್ಯವಾಣಿಯೇ ಸವಿಯಾದ ಅಮೃತದ ಧಾರೆ. ಇದನ್ನು ಕುಡಿದವನಿಗೆ ಮೋಕ್ಷದ ಬಾಗಿಲು ತೆರೆಯುವುದು. ನಾಮದ ಭಯ—ಭಾವವಿದ್ದವರು ತಮ್ಮ ಹೃದಯದಲ್ಲಿ ಗುರುಕೃತಿಯನ್ನೂ ಗುರುವಾಣಿಯನ್ನೂ ನೆಲೆಗೊಳಿಸಿಕೊಳ್ಳುವರು. ಇಂದ್ರನು ಮಳೆಗರೆಯುವನು, ಭೂಮಿ ಹಚ್ಚ ಹಸಿರು ಆಗುವುದು; ಘಟಘಟದಲ್ಲಿ ಅವನ ಜ್ಯೋತಿ ತುಂಬುವುದು. ದುರ್ಮತಿ ಬಂಜರು ಭೂಮಿಯಲ್ಲಿ ಬೀಜ ಬಿತ್ತುವನು. ಇದು ಗುರುಹೀನನ ಗುರುತು. ಸದ್ಗುರುವಿನ ಹೊರತು ಘೋರ ಅಂಧಕಾರವೇ ಸರಿ. ನೀರಿಲ್ಲದೆಯೂ ಇಲ್ಲಿ ಜನ ಮುಳುಗಿ ಸಾಯುವರು (೧೨೭೫)

## ಗುರು ಶಬ್ದವೇ ಗುರು

(೮೦)

ಗುರು ಶಬ್ದವೇ ಗುರು; ಅದು ಗಹನವಾದುದು, ಗಂಭೀರವಾದುದು. ಶಬ್ದವಿಲ್ಲದ ಈ ಜಗತ್ತು ಹುಚ್ಚು. ಯಾರ ಮನಸ್ಸು ಪ್ರಪಂಚದಿಂದ ಪೂರ್ಣ ವಿರಕ್ತವಾಯಿತೋ ಅವನು ಸಹಜ ಸೌಭಾಗ್ಯಶಾಲಿ ಎಂದು ನಾನಕನ ಮನಸ್ಸು ಒಪ್ಪಿತು. (೬೩೫)

(೮೧)

ನಾನಕನು ಹೇಳುವುದೇನೆಂದರೆ ನಿಜವಾದ ವಾಣಿಯ ಮುಖಾಂತರ ಪ್ರೀತಿಸಿದರೆ ಮತ್ತು ಇದನ್ನು ಕುರಿತು ವಿಚಾರಮಾಡಿದರೆ ಮೋಕ್ಷದ್ವಾರವು ಸಿಗುವುದು; ಶಬ್ದವೇ ಜಪತಪದ ಸಾರವು ಎಂಬುದು ತಿಳಿಯುವುದು. (೬೬೧)

## ಆರತಿ[1]

(೮೨)

ಗಗನವೇ ತಟ್ಟೆ, ರವಿಚಂದ್ರರೇ ದೀವಿಗೆ, ತಾರಾಮಂಡಲವೇ ಮುತ್ತುಗಳು. ಮಲಯಾನಿಲವೇ ಧೂಪ, ಪವನವೇ ಚಾಮರ ಬೀಸುವುದು. ಸಕಲ ವನಸ್ಪತಿಗಳ ಹೂವುಗಳೇ ಜ್ಯೋತಿಗಳು ಹೇ ಭವಖಂಡನ, ಎಂಥ

1. ಗುರುನಾನಕ ದೇವರು ಜಗನ್ನಾಥನ ಮಂದಿರಕ್ಕೆ ಹೋದಾಗ, ಸಾಯಂಕಾಲ ಜಗನ್ನಾಥನ ಮೂರ್ತಿಯ ಆರತಿಯ ಕಾಲಕ್ಕೆ ಬರಬೇಕೆಂದು ಪೂಜಾರಿಗಳು ಅವರಿಗೆ ತಿಳಿಸಿದರು. ಒಂದು ತಟ್ಟೆಯಲ್ಲಿ ದೀವಿಗೆಗಳನ್ನು ಹಚ್ಚಿಟ್ಟಿದ್ದರು. ಧೂಪವನ್ನೂ ಹೊತ್ತಿಸಲಾಗಿತ್ತು. ಮೂರ್ತಿಯ ಮೇಲೆ ಹಾಕಲು ಹೂವುಗಳನ್ನೂ ಇಡಲಾಗಿತ್ತು. ಗುರು ನಾನಕದೇವರು ತಮ್ಮ ಈಶ್ವರನ ಆರತಿಯು ತಾನಾಗಿಯೆ ಆಗುತ್ತಿರುವುದು ಎಂಬ ಈ ಪದದ ರಚನೆ ಮಾಡಿದರು.

ಕೈಸೀ ಆರತೀ ಹೋಇ ಭವ ಖಂಡನಾ ತೇರೀ ಆರತೀ ॥
ಅನಹತಾ ಸಬದ ವಾಜಂತ ಭೇರಿ ॥ ೧ ॥ ರಹಊ ॥
ಸಹಸ ತವ ನೈನ ನನ ನೈನ ಹೈ ತೋಹಿ ಕಉ ಸಹಸ ಮೂರತಿ ನನಾ ಏಕ ತೋಹೀ ॥
ಸದಸ ಪದ ವಿಮಲ ನನ ಏಕ ಪದ ಗಂಧ ಬಿನು ಸಹಸ ತವ ಗಂಧ ಇವ ಚಲತ ಮೋಹೀ ॥ ೨ ॥
ಸಭ ಮಹಿ ಜೋತಿ ಹೈ ಸೋಇ ॥ ತಿಸ ಕೈ ಚಾನಣಿ ಸಭ ಮಹಿ ಚಾನಣು ಹೋಇ ॥
ಗುರ ಸಾಖೀ ಜೋತಿ ಪರಗಟು ಹೋಇ ॥ ಜೋ ತಿಸು ಭಾವೈ ಸು ಆರತೀ ಹೋಇ ॥ ೩ ॥
ಹರಿ ಚರಣ ಕಮಲ ಮಕರಂದ ಲೋಭಿತ ಮನೊ ಅನದಿನೊ ಮೋಹಿ ಆಹೀ ಪಿಆಸಾ ॥
ಕೃಪಾ ಜಲು ದೇಹಿ ನಾನಕ ಸಾರಿಂಗ ಕಉ ಹೋಇ ಜಾ ತೇ ತೇರೈ ನಾಮಿ ವಾಸಾ ॥ ೪ ॥ ೧ ॥
॥ ೭ ॥ ೯॥

—ಧನಾಸರೀ.

## ಸಾಂಸಾರಿಕ ವಸ್ತುಏಂ ಅಸ್ಥಿರ ಹೈಂ

(೮೩)

ಧನು ಜೋಬನು ಅರು ಫುಲಡಾ ನಾಠೀಅಡೆ ದಿನ ಚಾರಿ ॥
ಪಬಣಿ ಕೇರೆ ಪತ ಜಿಉ ಢಲಿ ಢುಲಿ ಜುಂಮಣಹಾರ ॥ ೧ ॥
ರಂಗು ಮಾಣಿ ಲೈ ಪಿಆರಿಆ ಜಾ ಜೋಬನು ನಉ ಹುಲಾ ॥
ದಿನ ಥೋಡಡೆ ಥಕೆ ಭಇಆ ಪುರಾಣಾ ಚೋಲಾ ॥ ೧ ॥ ರಹಾಉ ॥
ಸಜಣ ಮೇರೆ ರಂಗುಲೇ ಜಾಇ ಸುತೆ ಜೀರಾಣಿ ॥
ಹಂಭೀ ವಂಞಾ ಡುಂಮಣೀ ರೋವಾ ಝೀಣೀ ಬಾಣಿ ॥ ೨ ॥
ಕೀ ನ ಸುಣೇಹಿ ಗೋರೀಏ ಆಪಣ ಕಂನೀ ಸೋಇ ॥
ಲಗೀ ಆವಹಿ ಸಾಹುರೈ ನಿತ ನ ಪೇಈಆ ಹೋಇ ॥ ೩ ॥
ನಾನಕ ಸುತೀ ಪೇಈಐ ಜಾಣು ವಿರತೀ ಸಂನಿ ॥
ಗುಣಾ ಗವಾಈ ಗಂಠಡೀ ಅವಗಣ ಚಲೀ ಬಂನಿ ॥ ೪ ॥ ೨೪ ॥

—ಸಿರೀ ರಾಗು.

(೮೪)

ದರ ಧರ ಮಹಲಾ ಸೋಹಣೆ ಪಕೆ ಕೋಟ ಹಜಾರ ॥
ಹಸತಿ ಘೋಡೆ ಪಾಖರೆ ಲಸಕರ ಲಖ ಅಪಾರ ॥
ಕಿಸಹೀ ನಾಲಿ ನ ಚಲಿಆ ಖಪಿ ಖಪಿ ಮುಏ ಅಸಾರ ॥ ೩ ॥
ಸುಇನಾ ರೂಪಾ ಸಂಚಿಐ ಮಾಲು ಜಾಲು ಜಂಜಾಲು ॥
ಸಭ ಜಗ ಮಹಿ ದೋಹೀ ಫೇರೀಐ ಬಿನು ನಾವೈ ಸಿರಿ ಕಾಲು ॥
ಪಿಂಡು ಪಡೈ ಜೀಉ ಖೇಲಸಿ ಬದಫೈಲೀ ಕಿಆ ಹಾಲು ॥ ೪ ॥

(೧೩೫)

ಯಾವನು ಸಹಜಭಾವದಿಂದ ವಿದ್ಯಾದಾನ ಮಾಡುವನೋ, ವಿದ್ಯೆಯಲ್ಲಿ ಸಂಶೋಧನ ಮಾಡುವನೋ, ತತ್ವಗ್ರಹಣ ಮಾಡುವನೋ, ರಾಮನಾಮದಲ್ಲಿ ಮಗ್ನನಾಗಿರುವನೋ ಅವನೇ ಉಪಾಧ್ಯಾಯ ಅಥವಾ ಪಂಡಿತನೆನಿಸಿಕೊಳ್ಳುವನು. ಮನಮುಖನು ವಿದ್ಯೆಯನ್ನು ವಿಕ್ರಯಿಸುವನು, ಅತಃ ಅವನು ವಿಷ ಗಳಿಸಿ ವಿಷ ಕುಡಿಯುವನು. ಆ ಮೂರ್ಖನು ಶಬ್ದವನ್ನು ಗುರುತಿಸನು; ಅವನಿಗೆ ಅರಿವು—ತಿಳಿವು ಇರುವುದಿಲ್ಲ. ನಾಮಸ್ಮರಣಮಾಡಿರಿ. ನಾಮಸಂಗ್ರಹಮಾಡಿರಿ, ಜಗತ್ತಿನಲ್ಲಿ ಬಂದುದಕ್ಕೆ ಇದು ಲಾಭ ಎಂದು ಶಿಷ್ಯರಿಗೆ ಬುದ್ಧಿಯನ್ನು ಕೊಡುವವನೇ ಪಂಡಿತ ಗುರುಮುಖನು. ಸತ್ಯದ ಪಾಟಿಯನ್ನು ಹಿಡಿಯಿರಿ. ಸತ್ಯಮನದಿಂದ ಓದಿರಿ; ಶಬ್ದವೇ ಸಾರವಾದುದು ಈ ಜಗತ್ತಿನಲ್ಲಿ. ಯಾರ ಕೊರಳಲ್ಲಿ ರಾಮನಾಮದ ಹಾರವಿರುವುದೋ ಅವನೇ ವಿದ್ವಾಂಸನು. ಅವನೇ ಪಂಡಿತನು. ಅವನೇ ಜಾಣನು ಎಂದು ನಾನಕನು ಹೇಳುತ್ತಾನೆ.

(೯೩೭–೩೮)

(೧೩೬)

ಎಲ್ಲ ಮಾಸ, ಋತು, ಗಳಿಗೆ. ಮುಹೂರ್ತಗಳಲ್ಲಿ ನಾನು ಪ್ರಭುವನ್ನು ಕುರಿತು ಮನನ ಮಾಡಿರುವೆನು. ಹೇ ಸತ್ಯನೇ, ಅಗೋಚರನೆ, ನೀನು ಅಪಾರನು, ಗಣನೆಯಿಂದ ನಿನ್ನನ್ನು ಅರಿಯಲಿಕ್ಕಾಗುವುದಿಲ್ಲ; ಲೋಭ, ಮೋಹ, ಅಹಂಕಾರವಿದ್ದವನು ಶಿಕ್ಷಿತನಿದ್ದರೂ ಮೂರ್ಖನು. ಗುರುಮತಿಯ ವಿಚಾರವು ಒಂದೇ: ನಾಮ ವನ್ನು ಓದಿರಿ, ನಾಮವನ್ನು ಅರಿಯಿರಿ. ಗುರುಮತಿಯಿಂದ ನಾಮಧನವನ್ನು ಗಳಿಸಬೇಕು ಮತ್ತು ಭಕ್ತಿ ಯಿಂದ ಭಂಡಾರವನ್ನು ತುಂಬಿಕೊಳ್ಳಬೇಕು. ನಾಮವನ್ನು ಮನ್ನಿಸುವುದರಿಂದ ನಿರ್ಮಲರಾಗುವರು. ಸತ್ಯನ ದ್ವಾರದಲ್ಲಿ ಸತ್ಯಾಚಾರಿಗಳು ಸದಾ ಇರುವರು. ಎಲ್ಲ ಜೀವಗಳು, ಪ್ರಾಣಗಳು ನಿನ್ನವೇ; ಎಲ್ಲರಲ್ಲಿ ನಿನ್ನದೇ ಜ್ಯೋತಿ ಇರುವುದು. ನೀನೊಬ್ಬನೇ ನಿಜವಾದ ಸಾಹುಕಾರ; ಇಡಿ ಜಗತ್ತು ನಿನ್ನನ್ನು ಅವಲಂಬಿಸಿ ರುವ ವ್ಯಾಪಾರಿ.

(೧೪೦)

## ಆಂತರಿಕ ಪರಿವರ್ತನವಿಲ್ಲದೆ ವೇಷ, ರೀತಿ, ನಡತೆ ನಡಾವಳಿ, ಪೂಜೆ, ಜಪ, ತಪ, ತೀರ್ಥಯಾತ್ರೆ ಮತ್ತು ಸಂಯಮ ವ್ಯರ್ಥ

(೧೩೭)

ಕೆಲವರು ಗಡ್ಡೆಗೆಣಸು ತಿನ್ನುವರು ವನಪ್ರದೇಶಗಳಲ್ಲಿರುವರು. ಕೆಲವರು ಕಾಷಾಯ ವೇಷ ವಸ್ತ್ರಧರಿಸಿ ಯೋಗಿಗಳು, ಸಂನ್ಯಾಸಿಗಳಾಗಿ ನಿತ್ಯ ಅಲೆದಾಡುವರು. ಆದರೆ ಅವರ ಅಂತರಂಗದಲ್ಲಿ ತೃಷ್ಣೆ, ಊಟ—ಉಡಿಗೆಯ ಆಸೆ ಇರುವುದು. ಅವರು ತಮ್ಮ ಜನ್ಮ ವ್ಯರ್ಥ ಕಳೆದುಕೊಂಡರು, ಗೃಹಸ್ಥರಾಗಿಯೂ ಇರಲಿಲ್ಲ, ವಿರಕ್ತರಾಗಿಯೂ ಇರಲಿಲ್ಲ. ಅವರ ತಲೆಯ ಮೇಲಿಂದ ಯಮಕಾಲವು ಕೆಳಗಿಳಿಯುವುದಿಲ್ಲ. ಅವರ ಮನವು ತ್ರಿಗುಣಗಳ ವಶದಲ್ಲಿ ತೊಳಲುತ್ತಿರುವುದು. ಗುರುಮುಖಿಯ ಹತ್ತಿರ ಕಾಲನು ಬರುವುದಿಲ್ಲ. ಪ್ರಭುವಿನ ದಾಸರ ದಾಸರು ನೀವು ಆದರೆ ಮಾತ್ರ. ಸತ್ಯ ಶಬ್ದವು ಸದಾ ಸತ್ಯ ಮನದಲ್ಲಿರುವುದು.

ಸಚಾ ಸಬದು ಸಚು ಮನಿ ಘರ ಹೀ ಮಾಹಿ ಉದಾಸಾ ॥
ਨਾਨਕ ಸತಿಗುರು ಸೇವನಿ ಆಪಣಾ ਸੇ ಆಸಾ ತੇ ನಿರಾಸಾ ॥

**ವಾರ ಮಾಝು ಸಲುಡೀ ೫.**

(೧೩೮)

ಜಗು ಪರ ಬೋಧಹಿ ಮಡೀ ವಧಾವಹಿ ॥ ಆಸಣು ತಿಆಗಿ ಕಾಹೆ ಸಚು ಪಾವಹಿ ॥
ಮಮತಾ ಮೋಹು ಕಾಮಣಿ ಹಿತಕಾರೀ ॥ ನಾ ಅಉಧೂತಿ ನಾ ಸಂಸಾರೀ ॥ ೧ ॥
ಜೋಗೀ ಬೈಸಿ ರಹಹು ದುಬಿಧಾ ದುಃಖು ಭಾಗೈ ॥ ಘರಿ ಘರಿ ಮಾಗತ
ಲಾಜ ನ ಲಾಗೈ ॥ ೧ ॥ ರಹಾಉ ॥
ಗಾವಹಿ ಗೀತ ನ ಚೀನಹಿ ಆಪು ॥ ಕಿಉ ಲಾಗೀ, ನಿವರೈ ಪರತಾಪು ॥
ಗುರ ಕೈ ಸಬದಿ ರಚೈ ಮನ ಭಾಇ ॥ ಭಿಖಿಆ ಸಹಜ ಬೀಚಾರಿ ಖಾಇ ॥ ೨ ॥
ಭಸಮ ಚಢಾ ಕರಹಿ ಪಾಖಂಡ ॥ ಮಾಇಆ ಮೋಹಿ ಸಹಹಿ ಜಮ ಡಂಡು ॥
ಫೂಟೈ ಖಾಪರು ಭೀಖ ನ ಭಾಇ ॥ ಬಂಧನಿ ಬಾಧಿಆ ಆವೈ ಜಾಇ ॥ ೩ ॥
ಬಿಂದು ನ ರಾಖಹಿ ಜಾತೀ ಕಹಾವಹಿ ॥ ಮಾಈ ಮಾಗತ ತ್ರೈ ಲೋಭಾವಹಿ ॥
ನಿರದಇಆ ನಹೀ ಜೋತಿ ಉಜಾಲಾ ॥ ಬೂಡತ ಬೂಡೆ ಸರಬ ಜಂಜಾಲಾ ॥ ೪ ॥
ಭೇಖ ಕರಹಿ ಖಿಂಥಾ ಬಹು ಥಟೂಆ ॥ ಝೂಠೊ ಖೇಲು ಖೇಲೈ ಬಹು ನಟೂಆ ॥
ಅಂತರಿ ಅಗನಿ ಚಿಂತಾ ಬಹು ಜಾರೆ ॥ ವಿಣು ಕರಮಾ ಕೈಸೆ ಉತರಸಿ ಪಾರೆ ॥ ೫ ॥
ಮುಂದ್ರಾ ಫಟಕ ಬನಾಈ ಕಾನಿ ॥ ಮುಕತಿ ನಹೀ ಬಿದಿಆ ಬಿಗಿಆನಿ ॥
ಜಿಹವಾ ಇಂದ್ರೀ ಸಾದಿ ಲೋಭಾನಾ ॥ ಪಸೂ ಭಏ ನಹೀ ಮಿಟೈ ನೀಸಾನಾ ॥ ೬ ॥
ತ್ರಿವಿಧಿ ಲೋಗಾ ತ್ರಿವಿಧಿ ಜೋಗಾ ॥ ಸಬದು ಬೀಚಾರೈ ಚೂಕಸಿ ಸೋಗಾ ॥
ಊಜಲ ಸೋಚು ಸು ಸಬದು ಹೋಇ ॥ ಜೋಗೀ ಜುಗತಿ ವೀಚಾರೆ ಸೋಇ ॥ ೭ ॥
ತುಝು ಪಹಿ ನಉನಿಧಿ ತೂ ಕರಣೈ ಜೋಗು ॥ ಥಾಪಿ ಉಥಾಪೆ ಕರೇಸು ಹೋಗು ॥
ಜತು ಸತು ಸಂಜಮು ಸಚು ಸು ಚೀತು ॥ ನಾನಕ ಜೋಗೀ ತ್ರಿಭವಣ ಮೀತು ॥ ೮ ॥ ೨ ॥

**ರಾಮುಕಲೀ ಅಸಟಪದೀಆ.**

(೧೩೯)

ಇಕಿ ಬನ ಮಾಹಿ ಬೈಸಹಿ ಡೂಗರಿ ಅಸಥಾನು ॥ ನಾಮು ಬಿಸಾರಿ ಪಚಹಿ ಅಭಿಮಾನು ॥
ನಾಮ ಬಿನಾ ಕಿಆ ಗಿಆನ ಧಿಆನು ॥ ಗುರಮುಖಿ ಪಾವಹಿ ದರಗಹಿ ಮಾನು ॥ ೩ ॥
ಹಠು ಅಹಂಕಾರು ಕರೈ ನಹೀ ಪಾವೈ ॥ ಪಾಠ ಪಡೈ ಲೇ ಲೋಕ ಸುಣಾವೈ ॥
ತೀರಥಿ ಭರಮಸಿ ಬಿಆಧಿ ನ ಜಾವೈ ॥ ನಾಮ ಬಿನಾ ಕೈಸೆ ಸುಖು ಪಾವೈ ॥ ೪ ॥
ಜತನ ಕರೈ ಬಿಂದು ಕಿವೈ ನ ರಹಾಈ ॥ ಮನೂಆ ಡೋಲೈ ನರಕೈ ಪಾಈ ॥
ಸಜಾ ಜಮಪುರಿ ಬಾಧೊ ಲಹೈ ನಟಾಈ ॥ ಬಿನು ನಾವೈ ಜೀಉ ಜಲಿ ಬಲಿ ಜಾಇ ॥ ೫ ॥

ಗೃಹಸ್ಥರಿದ್ದು ಮನೆಯಲ್ಲಿದ್ದರೂ ಮನವು ಉದಾಸವಾಗಿರುವುದು. ತಮ್ಮ ಗುರುವಿನ ಸೇವೆ ಮಾಡುವವರು ಆಸೆಯಿಂದ ಮುಕ್ತರಾಗಿರುವರೆಂದು ನಾನಕನು ಹೇಳುತ್ತಾನೆ.

(೧೪೦)

(೧೩೮)

ಮಠಪತಿಗಳಾಗಿ ಜಗತ್ತಿಗೆ ಉಪದೇಶ ಮಾಡುವವರು, ತಮ್ಮ ಆಸನ (ಮನೆ) ಬಿಟ್ಟು ಹೇಗೆ ಸತ್ಯವನ್ನು – ಶಾಂತಿಯನ್ನು ಪಡೆಯುವರು ? ಅವರು ಮಮತೆ, ಮೋಹ ಮತ್ತು ಕಾಮಿನಿಯ ಹಿತೈಷಿಗಳು. ಅವರು ಅವಧೂತರಾಗಿಯೂ ಇರುವುದಿಲ್ಲ, ಗೃಹಸ್ಥರಾಗಿಯೂ ಇರುವುದಿಲ್ಲ. ಯೋಗಿಗಳೆ, ನಿಮ್ಮ ಆಸನದ ಮೇಲೆ ಭದ್ರವಾಗಿ ಕೂತಿರಿ; ದುಃಖಿಗಳು ದೂರ ಓಡಿಹೋಗುವವು, ಮನೆಮನೆ ತಿರುಗಿ ಬೇಡಲಿಕ್ಕೆ ನಿಮಗೆ ನಾಚಿಕೆಯುಂಟಾಗುವುದಿಲ್ಲವೆ ? ಗೀತಗಳನ್ನು ಹೇಳುವಿರಿ, ಆದರೆ ನಿಮ್ಮನ್ನು ನೀವು ಅರಿಯುವುದಿಲ್ಲ; ಹೀಗಿದ್ದರೆ ನಿಮ್ಮ ಪರಿತಾಪ ಹೇಗೆ ದೂರಾದೀತು ? ಮನದಲ್ಲಿ ಪ್ರೇಮವಿರಿಸಿಕೊಂಡು ಗುರುವಿನ ಶಬ್ದದಲ್ಲಿ ಸಮಾವೇಶಗೊಳ್ಳಿರಿ; ನಿಮಗೆ ಸಹಜವಾಗಿಯೆ ವಿಚಾರದ ಭಿಕ್ಷೆ ಸಿಗುವುದು. ಭಸ್ಮ ಲೇಪಿಸಿಕೊಂಡು ಆಡಂಬರ ತೋರಿಸುತ್ತೀರಿ; ಮಾಯಾ ಮೋಹದಲ್ಲಿ ಸಿಲುಕಿ ಯಮ ದಂಡವನ್ನು ಸಹಿಸುವಿರಿ. ಒಡೆದ ಕಪ್ಪರದಲ್ಲಿ ಭಾವದ ಭಿಕ್ಷೆನಿಲ್ಲುವುದಿಲ್ಲ. ಬಂಧನದಲ್ಲಿ ಸಿಲುಕಿದವನು ಬರುವನು, ಹೋಗುವನು. ಯತಿಯರೆನ್ನಿಸಿಕೊಳ್ಳುವಿರಿ, ವೀರ್ಯವನ್ನು ರಕ್ಷಿಸಿಕೊಳ್ಳಲಾರಿರಿ; 'ತಾಯೀ' ಎಂದು ಬೇಡುವಿರಿ, ಆದರೆ ಆಕೆಯನ್ನೇ ಮೋಹಿಸುವಿರಿ. ಓ ನಿರ್ದಯರೆ, ಒಳಗಿಲ್ಲ ಜ್ಯೋತಿ, ಬೆಳಕಿಲ್ಲ ಒಳಗೆ; ಅಡಿಯಿಂದ ಮುಡಿಯ ವರೆಗೆ ಪ್ರಪಂಚದ ಜೊಂಜಾಟದಲ್ಲಿ ಮುಳುಗಿರುವಿರಿ. ಚಿಂದಿಗಳ ದುಪ್ಪಟಿ ಹೊದೆದು ವೇಷಧಾರಿಗಳಾಗುವಿರಿ, ಡೊಂಬರಂತೆ ಬಹಳ ಆಟಗಳಾಡುವಿರಿ. ಚಿಂತೆಯೆಂಬ ಬೆಂಕಿ ಮನವನ್ನು ಸುಡುತ್ತಿರುವುದು, ಸತ್ಕರ್ಮಗಳನ್ನು ಮಾಡದೆ ಹೇಗೆ ಭವಸಾಗರ ದಾಟುವಿರಿ ? ಕಿವಿಗಳಲ್ಲಿ ಸ್ಫಟಿಕ ಮಣಿ ಮುದ್ರೆ ಧರಿಸಿರುವಿರಿ, ವಿದ್ಯಾ – ವಿಜ್ಞಾನ – ಹೀನರೇ, ಹೇಗೆ ಪಡೆಯುವಿರಿ ಮುಕ್ತಿ ? ನಾಲಿಗೆಯೆಂಬ ಇಂದ್ರಿಯವು ರುಚಿಗೆ ಮೋಹಗೊಂಡಿದೆ; ಇಂದ್ರಿಯಗಳು ಪಶುಸಮಾನ. ಕಲಂಕ ಹಣೆಗೆ ಒಮ್ಮೆ ಹತ್ತಿದ್ದು ಅಳಿಸಿಹೋಗದು. ಯೋಗಿಗಳೂ ಯೋಗಿಗಳಲ್ಲದವರೂ ತ್ರಿವಿಧ ಗುಣಗಳ ವಶದಲ್ಲಿರುವರು; ಅವರು ಶಬ್ದವನ್ನು ಕುರಿತು ವಿಚಾರ ಮಾಡಿದರೆ ಅವರ ಶೋಕವು ದೂರಾಗುವುದು. ಸುಶಬ್ದದ ಮುಖಾಂತರ ಉಜ್ವಲ – ಶುಚಿತ್ವವು ಬರುವುದು; ಯೋಗದ ಯುಕ್ತಿಯನ್ನು ಬಲ್ಲವನೇ ಯೋಗಿ. ನವನಿಧಿ ನಿನ್ನ ಒಳಿಯಲ್ಲಿರುವುದು, ಎಲ್ಲವನ್ನೂ ಮಾಡಲು ನೀನು ಸಮರ್ಥನು. ನೀನು ಮಾಡಲೂ ಬಲ್ಲೆ, ಕೆಡಿಸಲೂ ಬಲ್ಲೆ. ನೀನು ಮಾಡಿದಂತೆಯೆ ಎಲ್ಲವೂ ಆಗುವುದು. ಚಿತ್ತದಲ್ಲಿ ಸತ್ಯವಿದ್ದು ಜಪ ತಪ – ಸಂಯಮಗಳಿಂದ ಸಂಪನ್ನನಾದ ಯೋಗಿಯೇ ತ್ರಿಭುವನದ ಮಿತ್ರನು ಎಂದು ನಾನಕನು ಹೇಳುತ್ತಾನೆ.

(೯೦೩)

(೧೩೯)

ಇರುವರು ಕೆಲವರು ವನದಲ್ಲಿ, ಅಥವಾ ಪರ್ವತ ಪ್ರದೇಶದಲ್ಲಿ. ಅವರು ನಾಮವನ್ನು ಮರೆತು ಅಭಿಮಾನದಿಂದ ತಪಿಸುವರು. ನಾಮವನ್ನು ಬಿಟ್ಟು ಎಂಥ ಜ್ಞಾನ, ಎಂಥ ಧ್ಯಾನ ? ಗುರುಮುಖರಿಗೆ ಸನ್ಮಾನ—ಸಿಗುವುದು ಪ್ರಭುಚರಣಗಳಲ್ಲಿ. ಹಠ–ಅಹಂಕಾರದಿಂದ ಪ್ರಭುದೊರೆಯುವುದಿಲ್ಲ. ಬೇಕಾದಷ್ಟು ಗ್ರಂಥ ಓದಿರಿ, ಓದಿ ಓದಿ ಜನರಿಗೆ ಹೇಳಿರಿ. ತೀರ್ಥಯಾತ್ರೆಯಿಂದ ವ್ಯಾಧಿ ದೂರಾಗದು; ನಾಮವನ್ನು ತೊರೆದು ಹೇಗೆ ಸುಖ ಹೊಂದುವಿರಿ ? ಯತ್ನಿಸುವುದರಿಂದ ಮನಸ್ಸು ಅಥವಾ ಬಿಂದು ಅವನಲ್ಲಿ ಸ್ಥಿರವಾಗಿ ನಿಲ್ಲಬಲ್ಲುದೆ! ಮನವು ವಿಚಲಿತವಿದ್ದರೆ ನರಕದಲ್ಲಿ ಬೀಳುವಿರಿ. ಯಮಪುರಿಯಲ್ಲಿ ಬಂಧಿತನಾದವನು ನಿಶ್ಚಯವಾಗಿಯೂ ಶಿಕ್ಷೆಗೆ

ಸಿಧ ಸಾಧಿಕ ಕೇತೆ ಮುನಿ ದೇವಾ ॥ ಹರಿ ನಿಗ್ರುಹಿ ನ ತೃಪತಾವಹಿ ಭೇವಾ ॥
ಸಬದು ಬೀಚಾರಿ ಗಹಹಿ ಗುರ ಸೇವಾ ॥ ಮನಿ ನಿರಮಲ ಅಭಮಾನ ಅಭೇವಾ ॥ ೬ ॥
ಕರಮಿ ಮಿಲೈ ಪಾವೈ ಸಚು ನಾಉ ॥ ತುಮ ಸರಣಾಗತಿ ರಹಾಉ ಸುಭಾಉ ॥
ತುಮ ತೇ ಉಪಜಿಓ ಭಗತೀ ಭಾಉ ॥ ಜಪು ಜಾಪಉ ಗುರಮುಖಿ ಹರಿ ನಾಉ ॥ ೭ ॥
ಹಉಮೈ ಗರಬು ಜಾಇ ಮನ ಭೀನೈ ಝೂಠಿ ನ ಪಾವಸಿ ಪಾಖಿಂಡಿ ಕೀನೈ ॥
ಬಿನು ಗುರ ಸಬದ ನಹೀ ಘರು ಬಾರು ॥ ನಾನಕ ಗುರಮುಖಿ ತತು ಬೀಚಾರು ॥ ೮ ॥ ೬ ॥

ರಾಮಕಲೀ ಅಸಟಪದೀಆ.

(೧೪೦)
ಹಿಂದೂ ಕೈ ಘರಿ ಹಿಂದೂ ಆವೈ ॥ ਸೂತ ಜನೇಊ ಗಲಿ ಪಾವೈ ॥
ಸೂತು ಪਾਇ ಕರೆ ಬುರಿಆਈ ॥ ನಾತಾ ಧೋತಾ ಥಾਇ ನ ಪਾਈ ॥
ಮುಸಲಮಾನು ಕರೆ ವಡಿಆਈ ॥ ವಿಣು ಗುರ ಪೀਰੈ ಕೋ ಥਾਇ ನ ಪਾਈ ॥
ರಾಹು ದಸਾਇ ਓਥੈ ಕೋ ਜਾਇ ॥ ಕರಣੀ ಬਾਝਹੁ ਭਿਸਤਿ ನ ਪਾਇ ॥
ಜೋಗೀ ಕೈ ಘರಿ ಜುಗತಿ ದಸਾਈ ॥ ತಿತ ಕਾರಣਿ ಕਨਿ ಮੁਦ੍ਰਾ ಪਾਈ ॥
ಮುದ੍ರਾ ಪਾਇ ಫਿਰੈ ಸಂಸਾਰਿ ਜਿਥੈ ਕਿਥੈ ಸਿਰਜਣਹਾਰು ॥
ಜೇತೆ ಜೀಅ ತੇತೆ ವಾਟਾಊ ॥ ಚೀਰੀ ಆਈ ಢਿಲ ನ ಕਾಊ ॥
ਏਥੈ ಜਾಣੈ ಸು ಜਾਇ ಸಿಞಾಣੈ ಹੋਰು ಫಕಡು ಹಿಂದೂ ಮುಸಲಮಾಣੈ ॥
ಸಭನಾ ಕਾ ದರਿ ಲੇಖಾ ಹೋਇ ॥ ಕರಣೀಬਾಝਹੁ ತਰੈ ನ ಕੋਇ ॥
ಸਚೋ ಸಚು ಬಖಾਣੈ ಕੋਇ ॥ ನಾನಕ ಅਗੈ ಪੁಛ ನ ಹೋਇ ॥ ೨ ॥

ವಾರರಾಮಕಲೀ, ಪਉಡೀ ೧೧ ಸಲೋಕ.

(೧೪೧)
ಕುಬುಧಿ ಡೂಮಣೀ ಕುದਇಆ ಕಸਾਇਣਿ ಪರ ನಿಂದಾ ಘಟ ಚೂಹಡೀ ಮੁಠੀ ಕ੍ਰੋਧਿ ಚಂਡਾਲਿ ॥
ಕਾਰੀ ಕਢੀ ಕਿਆ ಥੀਐ ಜਾ ಚਾਰੇ ਬੈਠੀਆ ನਾਲਿ ॥
ಸಚು ಸಂಜಮು ಕರಣੀ ಕಾਰਾਂ ನಾವಣು ನਾਉ ಜಪੇਹੀ ॥
ನಾನಕ ಅਗੈ ಉತ್ತಮ ಸೇਈ ಜಿ ಪਾਪਾ ಪಂਦਿ ನ ದੇਹੀ ॥

ವಾರ ಸಿರೀ ರಾಗು ಪਉಡੀ ೨೦ ಸಲೋಕ.

(೧೪೨)
ಸೂಜೆ ਏਹਿ ನ ಆਖੀਅਹਿ ಬਹਿਨ ಜਿ ಪਿੰਡਾ ಧੋਇ ॥
ಸੂಜೆ ಸೇಈ ನಾನಕಾ ಜಿನ ಮನਿ ವಸਿਆ ಸೋਇ ॥

ವಾರ ಆಸಾ ಪਉಡੀ ॥ ೧೭ ॥

ತುತ್ತಾಗುವನು. ನಾಮವನ್ನುಳಿದು ಜೀವವು ಸುಡುತ್ತಲೇ ಇರುವುದು. ಎಷ್ಟೋ ಸಿದ್ಧರು, ಸಾಧಕರು, ಮುನಿಗಳು, ದೇವರು ಇರುವರು; ಅವರು ಹಠನಿಗ್ರಹಗಳಿಂದ ತೃಪ್ತರಾಗುವುದಿಲ್ಲ. ಯಾರು ಶಬ್ದವನ್ನು ಕುರಿತು ವಿಚಾರಮಾಡುತ್ತ ಗುರುಸೇವೆಯಲ್ಲಿ ತೊಡಗಿರುವರೊ, ತನುಮನಗಳನ್ನು ಶುಚಿಯಾಗಿಟ್ಟುಕೊಳ್ಳುವರೋ ಅವರ ಅಹಂಕಾರವು ದೂರಾಗುವುದು. ಯಾರ ಮೇಲೆ ಅವನ ಕೃಪೆಯಾಗುವುದೊ ಅವರು ಸತ್ಯನಾಮವನ್ನು ಪಡೆಯುವರು, ಅವರು ಪ್ರೀತಿಯಿಂದ ನಿನಗೆ ಶರಣು ಬರುವರು. ನಿನ್ನಿಂದಲೇ ಭಕ್ತಿಭಾವವು ಹುಟ್ಟುವುದು; ಗುರುವಿನ ಉಪದೇಶದಿಂದಾಗಿಯೆ ಹರಿನಾಮವನ್ನು ಜಪಿಸುವರು. ಮನಸ್ಸು ನಾಮದಲ್ಲಿ ತೊಯ್ದರೆ ಗರ್ವವು ನಷ್ಟವಾಗುವುದು. ಗುರುಮುಖಿನ ವಿಚಾರದ ಸಾರವು ಇದೇ ಎಂದು ನಾನಕನು ಹೇಳುತ್ತಾನೆ.

(೯೫೧–೫೨)

(೧೪೦)

ಹಿಂದೂಧರ್ಮವನ್ನು ಪ್ರವೇಶ ಮಾಡುವವನಿಗೆ ಮಂತ್ರ ಪಠಿಸಿ ಜನಿವಾರ ಹಾಕುವರು. ಜನಿವಾರ ಧರಿಸಿ ದುಷ್ಕರ್ಮ ಮಾಡುವನು; ಸ್ನಾನಾದಿಯಿಂದ ಅವನಿಗೇನೂ ಲಾಭವಿಲ್ಲ. ಮುಸಲ್ಮಾನನು ತನ್ನ ಧರ್ಮವನ್ನು ಕೊಂಡಾಡುವನು; ಗುರು ಪೀರನನ್ನು ತೊರೆದರೆ ಅವನು (ದರಗಾದಲ್ಲಿ) ಯಾವ ಸ್ಥಾನವನ್ನೂ ಪಡೆಯನು. ತೋರಿಸಿದ ಮಾರ್ಗದಲ್ಲಿ ನಡೆಯುವವರು ಯಾರು? ಸತ್ಕರ್ಮದ ವಿನಾ ಸ್ವರ್ಗ ಹೇಗ ಪಡೆಯುವಿರಿ ? ಯೋಗಿಗಳ ಪಂಥದಲ್ಲಿ ಪ್ರವೇಶಮಾಡ ಬಯಸಿದರೆ ಯೋಗದ ಯುಕ್ತಿಯನ್ನು ಹೇಳಿಕೊಡಲಾಗುವುದು; ಅವರು ಮುದ್ರಿಕೆ ತೊಟ್ಟು ದೇಶಾಟನ ಮಾಡುವರು. ಅಲ್ಲಿ ಇಲ್ಲಿ ಎಲ್ಲ ಕಡೆಯಲ್ಲಿ ಬರುವನು ಕರ್ತಾರನು. ಎಷ್ಟು ಜೀವರು ಇರುವರೊ ಎಲ್ಲರೂ ದಾರಿಹೋಕರು; ಸಾವಿನ ಸರತಿ ಬಂದಾಗ ತಡೆಯಲು ಆಗುವುದಿಲ್ಲ, ಇಹಲೋಕದಲ್ಲಿ ಪ್ರಭುವನ್ನು ಯಾರು ಅರಿಯುವರೋ ಅವರು ಮರಣಾನಂತರವೂ ಪರಲೋಕದಲ್ಲಿ ಅವನನ್ನು ಗುರುತಿಸುವರು. ಇದು ಇಲ್ಲದೆ ಹೋದರೆ ಹಿಂದೂ—ಮುಸಲ್ಮಾನರಾಗಿರುವುದೆಲ್ಲವೂ ವ್ಯರ್ಥವಾದುದು. ಅವನ ದ್ವಾರದಲ್ಲಿ ಎಲ್ಲರ ಲೆಕ್ಕವಾಗುವುದು; ಸತ್ಕರ್ಮಮಾಡದ ಹೊರತು ಯಾವನೂ ಮುಕ್ತಿ ಪಡೆಯಲಾರನು, ಕೇವಲ ಸತ್ಯವನ್ನು, ಶುದ್ಧ ಸತ್ಯವನ್ನು ಹೇಳುವವರು ಅಪರೂಪ, ಇಂಥ ಸತ್ಯವಂತನ ಪರೀಕ್ಷೆ ಪರಲೋಕದಲ್ಲಿ ಆಗದು ಎಂದು ನಾನಕನು ಹೇಳುತ್ತಾನೆ.

(೯೫೧–೫೨)

(೧೪೧)

ಕುಬುದ್ಧಿಯು ಡೊಂಬಳು; ನಿರ್ದಯೆ, ಕೊಲೆಗಡುಕಳು, ಪರನಿಂದೆ ಶರೀರದಲ್ಲಿರುವ ಭಂಗಿಯವಳು; ಕ್ರೋಧ — ಚಾಂಡಾಲಿನಿಯು ಆತ್ಮನಿಗೆ ಮೋಸಮಾಡಿರುವಳು. ಮಡಿಯ ಗೆರೆಯನ್ನು ಎಳೆಯುವುದರಿಂದೇನು ಪ್ರಯೋಜನ, ಈ ನಾಲ್ವರೂ ನಿಮ್ಮ ಅಂಗ – ಸಂಗದಲ್ಲಿ ಕುಳಿತಿರುವಾಗ ? ಸತ್ಯವೇ ಸಂಯಮ, ಸತ್ಕರ್ಮಗಳೇ ಗೆರೆಗಳು, ನಾಮಸ್ಮರಣವೇ ಸ್ನಾನ. ಬೇರೆಯವರಿಗೆ ಪಾಪದ ಶಿಕ್ಷಣ ಕೊಡಬೇಡಿರಿ, ಅಂದರೆ ಮಾತ್ರ ಪರಲೋಕದಲ್ಲಿ ಉತ್ತಮರೆನಿಸಿಕೊಳ್ಳುವಿರಿ ಎಂದು ನಾನಕನು ಹೇಳುತ್ತಾನೆ.

(೯೧)

(೧೪೨)

ಕಾಯವನ್ನು ಪ್ರಕ್ಷಾಲನ ಮಾಡಿಕೊಂಡು ಕುಳಿತವರು ಸ್ವಚ್ಛರಲ್ಲ. ಮನದಲ್ಲಿ ಪ್ರಭುವಿನ ನಿವಾಸವಿದ್ದರೇ ನಿರ್ಮಲರು ಎಂದು ನಾನಕನು ಹೇಳುತ್ತಾನೆ.

(೪೭೭)

127

 

(೧೪೩)
ಜೆ ರತು ಲಗೈ ಕಪಡೈ ಜಾಮಾ ಹೋಇ ಪಲೀತು ॥
ಜೊ ರತು ಪೀವಹಿ ಮಾಣಸಾ ತಿನ ಕಿಉ ನಿರಮಲು ಚೀತು ॥
ನಾನಕ ನಾಉ ಖುದಾಇ ಕಾ ದಿಲಿ ಹಛೈ ಮುಖಿ ಲೇಹು ॥
ಅವರಿ ದಿವಾಜೆ ದುನೀ ಕೇರ್ಝೂಠೇ ಅಮಲ ಕರೇಹು ॥ ೧ ॥

ವಾರ ಮಾಝು ಮಲುಡೀ ೬ ಸಲೋಕ.

## ಮನ ಜೀತೈ ಜಗು ಜೀತು

(೧೪೪)
ಮನು ಮೈಗಲು ಸಾಕತು ದೇವಾನಾ ॥ ಬನಖಂಡಿ ಮಾಇಆ ಮೋಹಿ ಹೈರಾನಾ ॥
ಇತ ಉತ ಜಾಹಿ ಕಾಲಕೇ ಚಾಪೆ ॥ ಗುರಮುಖಿ ಖೋಜಿ ಲಹೈ ಘರು ಆಪೆ ॥ ೧ ॥
ಬಿನು ಗುರ ಸಬದೈ ಮನು ನಹೀ ಠಉರಾ ॥
ಸಿಮರಹು ರಾಮ ನಾಮು ಅತಿ ನಿರಮಲು ಅವರ ತಿಆಗಹು ಹಉಮೈ ಕಉರಾ ॥ ೧ ॥ ರಹಾಉ ॥
ಇಹು ಮನು ಮುಗಧು ಕಹಹು ಕಿಉ ರಹಸೀ ॥ ಬಿನು ಸಮಝೆ ಜಮ ಕಾ ದುಖು ಸಹಸೀ ॥
ಆಪೆ ಬಖಸೆ ಸತಿಗುರು ಮೇಲೈ ॥ ಕಾಲು ಕಂಟಕು ಮಾರೆ ಸಚು ಪೇಲೈ ॥ ೨ ॥
ಇಹು ಮನು ಕರಮಾ ಇಹು ಮನು ಧರಮಾ ॥ ಇಹು ಮನು ಪಂಚ ತತು ತೇ ಜನಮಾ ॥
ಸಾಕತು ಲೋಭೀ ಇಹು ಮನು ಮೂಡಾ ॥ ಗುರಮುಖಿ ನಾಮು ಜಪೈ ಮನು ರೂಡಾ ॥ ೩ ॥
ಗುರುಮುಖಿ ಮನು ಅಸಥಾನೆ ಸೋಈ ॥ ಗುರಮುಖಿ ತ್ರಿಭವಣಿ ಸೋಝೀ ಹೋಈ ॥
ಇಹು ಮನು ಜೋಗಿ ಭೋಗೀ ತಪು ತಾಪೈ ॥ ಗುರಮುಖಿ ಚೀನ್ಹೈ ಹರಿ ಪ್ರಭು ಆಪೈ ॥ ೪ ॥
ಮನು ಬೈರಾಗೀ ಹಉಮೈ ತಿಆಗೀ ॥ ಘಟಿ ಘಟಿ ಮನಸಾ ದುವಿಧಾ ಲಾಗೀ ॥
ರಾಮ ರಸಾಇಣು ಗುರಮುಖಿ ಚಾಖೈ ॥ ದರಿ ಘರಿ ಮಹಲೀ ಹರಿ ಪತಿ ರಾಖೈ ॥ ೫ ॥
ಇಹು ಮನು ರಾಜಾ ಸೂರ ಸಂಗ್ರಾಮಿ ॥ ಇಹು ಮನು ನಿರಭಉ ಗುರಮುಖಿ ನಾಮಿ ॥
ಮಾರೆ ಪಂಚ ಅಪುನೈ ವಸಿ ಕೀಏ ॥ ಹಉಮೈ ಗ್ರಾಸಿ ಇಕತು ಥಾಇ ಕೀಏ ॥ ೬ ॥
ಗುರಮುಖಿ ರಾಗ ಸುಆದ ಅನ ತಿಆಗೆ ॥ ಗುರಮುಖಿ ಇಹು ಮನು ಭಗತಿ ಜಾಗೆ ॥
ಅನಹದ ಸುಣಿ ಮಾನಿಆ ಸಬದು ವೀಚಾರಿ ॥ ಆತಮು ಚೀನ್ಹಿ ಭಏ ನಿರಂಕಾರೀ ॥ ೭ ॥
ಇಹು ಮನ ನಿರಮಲು ದರಿ ಘರಿ ಸೋಈ ॥ ಗುರಮುಖಿ ಭಗಿತ ಭಾಉ ಧುನಿ ಹೋಈ ॥
ಅಹನಿಸಿ ಹರಿ ಜಸು ಗುರಪರಸಾದಿ ॥ ಘಟಿ ಘಟಿ ಪ್ರಭು ಆದಿ ಜುಗಾದಿ ॥ ೮ ॥
ರಾಮ ರಸಾಇಣಿ ಇಹು ಮನು ಮಾತಾ ॥ ಸರಬ ರಸಾಇಣು ಗುರಮುಖಿ ಜಾತಾ ॥
ಭಗತಿ ಹೇತು ಗುರ ಚರಣ ನಿವಾಸಾ ॥ ನಾನಕ ಹರಿ ಜನಕೇ ದಾಸನಿ ದಾಸಾ ॥ ೯ ॥ ೮ ॥

ಆಸಾ ಅಸಟಪದೀಆ.

(೧೪೫)
ತರವರು ಕಾಇਆ ಪಂಖಿ ಮನು ತರವರಿ ಪಂಖೀ ಪಂಚ ॥
ತತು ಚುಗಹಿ ಮಿಲಿ ಏಕಸೆ ತಿನ ಕಉ ಫಾಸ ನ ರಂಚ ॥

(೧೪೩)

ವಸ್ತ್ರಕ್ಕೆ ರಕ್ತ ಹತ್ತಿದರೆ ಅದು ಅಪವಿತ್ರವೆಂದು ಎಣಿಸಲಾಗುವುದು. ಯಾರು ಮಾನವರ ರಕ್ತವನ್ನು ಕುಡಿಯುವರೋ ಅವರ ಚಿತ್ತವು ಹೇಗೆ ನಿರ್ಮಲವಾಗಿರಬಲ್ಲದು? ಆದ್ದರಿಂದ ಪ್ರಭುವಿನ ಹೆಸರನ್ನು ಉಚ್ಚರಿಸಿರಿ, ಅಂತಃಕರಣವು ಸ್ವಚ್ಛವಾಗಿರುವಾಗ. ಇಲ್ಲದಿದ್ದರೆ ಅದು ಪ್ರಪಂಚಕ್ಕೆ ತೋರಿಕೆಯು ಮತ್ತು ಅಸತ್ಯದ ಕರ್ಮವೆನಿಸುವದು ಎಂದು ನಾನಕನು ಹೇಳುತ್ತಾನೆ. (೧೪೦)

(೧೪೪)

## ಮನವ ಗೆದ್ದರೆ ಜಗತ್ತು ಗೆದ್ದಂತೆ

ಪಾಪೀ ಮನವು ಮದೋನ್ಮತ್ತ ಆನೆಯಂತೆ ಹುಚ್ಚಾಗಿ ಮಾಯೆ ಮೋಹದ ಅಡವಿಯಲ್ಲಿ ಹೈರಾಣಾಗಿ ತಿರುಗುತಲಿರುವುದು. ಕಾಲದ ಒತ್ತಡಕ್ಕೆ ಸಿಕ್ಕಿ ಅತ್ತಿತ್ತ ತಿರುಗುತ್ತಿರುವುದು. ಅದು ಗುರು ಮುಖವಾದಾಗ ಸ್ವಯಂ ತನ್ನ ಮನೆಯನ್ನು ಹುಡುಕಿಕೊಳ್ಳುವುದು. ಗುರುಶಬ್ದವಿಲ್ಲದೆ ಮನಸ್ಸು ಸ್ಥಿರವಾಗಿ ನಿಲ್ಲದು. ಅತಿ ನಿರ್ಮಲವಾದ ರಾಮನಾಮವನ್ನು ಸ್ಮರಿಸಿರಿ. ಇದನ್ನು ಬಿಟ್ಟು ಇರುವುದೆಲ್ಲವೂ ಕಟುವಾದ ಅಹಂಕಾರವು, ಅದನ್ನು ತ್ಯಜಿಸಿರಿ. ಮನವು ಮುಗ್ಧವಾದುದು, ಹೇಳಿರಿ ಇದು ಹೇಗೆ ನಿಂತೀತು: ಜ್ಞಾನ ಹೀನನು ಮೃತ್ಯುವಿನ ದುಃಖವನ್ನು ಸಹಿಸುವುದು. ಪರಮಾತ್ಮನ ದಯೆಯಿಂದ ಸದ್ಗುರುವಿನ ಭೆಟ್ಟಿಯಾಗುವುದು. ಆಗ ಸತ್ಯದ ಮುಖಾಂತರ ಪ್ರೇರಿತನಾಗಿ ಅವನು ಕಾಲಕಂಟಕವನ್ನು ನಾಶಗೊಳಿಸುವನು. ಈ ಮನಸ್ಸು ಕರ್ಮ – ಧರ್ಮದ ಸಂಚಾಲಕ, ಈ ಮನಸ್ಸು ಪಂಚ ತತ್ವಗಳಿಂದ ಉಂಟಾದುದು. ಈ ಮನಸ್ಸು ಶಾಕ್ತವು, ಲೋಭಿಯು, ಮೂಢವು. ಮನಸ್ಸು ನಾಮವನ್ನು ಜಪಿಸಿದಾಗ ಸುಂದರವಾಗುವುದು. ಗುರುಮುಖಿನ ಮನಸ್ಸು ಸ್ವಸ್ಥಾನವನ್ನು ಪಡೆಯುವುದು. ಗುರುವಿನ ಕೃಪೆಯಿಂದ ತ್ರಿಭುವನದ ಜ್ಞಾನಿಯಾಗುವುದು. ಈ ಮನವು ಯೋಗಿಯೂ, ಭೋಗಿಯೂ, ತಪಸ್ವಿಯೂ ಆಗಿರುವುದು. ಗುರುವಿನ ಮುಖಾಂತರ ಪ್ರಭುವನ್ನೂ ತನ್ನನ್ನೂ ಅರಿತುಕೊಳ್ಳುವದು. ಈ ಮನವು ಘಟಘಟದಲ್ಲಿರುವ ತೃಷ್ಣೆ, ದ್ವಿಧಾ, ಅಹಮ್ ತೊರೆದರೆ ವಿರಾಗಿಯಾಗುವುದು, ನಿರ್ಮಲವಾಗುವುದು. ಗುರುಮುಖಿನು ರಾಮರಸಾಯನವನ್ನು ಕುಡಿಯುವನು. ಹರಿಯು ಇಹ-ಲೋಕದಲ್ಲಿಯೂ, ಪರಲೋಕದಲ್ಲಿಯೂ ಅವನ ಮಾನವನ್ನು ರಕ್ಷಿಸುವನು. ಈ ಮನವು ಅರಸ ಹಾಗೂ ಸಂಗ್ರಾಮ ಶೂರನಂತಿರುವುದು, ನಾಮದ ಮುಖಾಂತರ ಈ ಮನವು ನಿರ್ಭಯ ಗುರುಮುಖವಾಗುವುದು. ಪಂಚರನ್ನು ಪರಾಜಿತಗೊಳಿಸಿ ಅವನ್ನು ತನ್ನ ವಶದಲ್ಲಿ ತೆಗೆದುಕೊಳ್ಳುವದು. ಅಹಮ್ಮನ್ನು ಒಂದೇ ತುತ್ತಾಗಿ ತಿಂದು ಬಿಡುವುದು; ಪಂಚರನ್ನು ಒಂದೇ ಸ್ಥಳದಲ್ಲಿ ಕೆಡವಿ ಬಿಡುವುದು. ಗುರುಮುಖಿನು ಬೇರೆ ಬೇರೆ ರಾಗ ಸ್ವಾದಗಳನ್ನು ತ್ಯಜಿಸುವನು. ಗುರುಮುಖವಾದ ಮನವು ಭಕ್ತಿಯಲ್ಲಿ ಜಾಗರೂಕವಾಗಿರುವುದು. ಅನಹದ ಶ್ರವಣ, ಮನನ, ಚಿಂತನ ಮಾಡುವುದು: ಆತ್ಮವನ್ನು ಗುರುತಿಸಿ ಸ್ವಯಂ ನಿರಂಕಾರವಾಗುವುದು. ಈ ಮನವು ನಿರ್ಮಲವಾಗಿ ಅಲ್ಲಿ ಇಲ್ಲಿ ಒಬ್ಬನನ್ನೇ ನೋಡುವುದು; ಗುರುಮುಖಿನ ಧ್ಯಾನವು ಭಾವಭಕ್ತಿಯಲ್ಲಿ ತೊಡಗಿರುವುದು. ಗುರುವಿನ ಕೃಪೆಯಿಂದ ಈ ಮನಸ್ಸು ಹರಿಯ ಕೀರ್ತನೆಯಲ್ಲಿ ಲೀನವಾಗಿರುವುದು. ಅನಾದಿ ಕಾಲದಿಂದ ಹರಿಯು ಘಟಘಟದಲ್ಲಿ ವ್ಯಾಪ್ತನು. ರಾಮರಸಾಯನ ಕುಡಿದು ಈ ಮನಸ್ಸು ಮಸ್ತಾಗಿರುವುದು; ಗುರುವಿನ ಕೃಪೆಯಿಂದ ಸರ್ವರಸಾಯನವನ್ನು ಅರಿತುಕೊಂಡಿತು. ಭಕ್ತಿಯಿಂದಾಗಿ ಅದು ಗುರುಚರಣದಲ್ಲಿ ನಿವಾಸಮಾಡುವುದು. ಅದು ಹರಿಜನರ ದಾಸಾನುದಾಸ ಎಂದು ನಾನಕನು ಹೇಳುತ್ತಾನೆ. (೪೧೫-೧೬)

(೧೪೫)

ಈ ಕಾಯವೊಂದು ಮರ. ಅದರ ಮೇಲೆ ಮನವೆಂಬ ಪಕ್ಷಿಯೊಂದು ಕುಳಿತಿದೆ. ಅದರ ಜೊತೆಗೆ ಬೇರೆ ಐದು ಪಕ್ಷಿಗಳೂ ಕುಳಿತಿರುವವು. ಎಲ್ಲವೂ ಒಟ್ಟಾಗಿ ತತ್ವದ ಕಾಳನ್ನು ತಿಂದರೆ ಇವು ಬಲೆಯಲ್ಲಿ ಸಿಗುವುದಿಲ್ಲ.

ಉಡಹಿ ತ ಬೇಗುಲ ಬೇಗುಲೆ ತಾಕಹಿ ಜೋಗ ಘಣೀ ॥
ಪಂಖ ತುಟೆ ಪಾಹೀ ಪಡೀ ಅವಗುಣಿ ಭೀಡ ಬಣೀ ॥
ಬಿನು ಸಾಚೆ ಕಿಉ ಛೂಟೀಐ ಹರಿ ಗುಣ ಕರಮಿ ಮಣೀ ॥
ಆಪಿ ಛಡಾಏ ಛೂಟೀಐ ವಡಾ ಆಪಿ ಧಣೀ ॥
ಗುರಪರಸಾದೀ ಛೂಟೀಐ ಕಿರಪಾ ಆಪಿ ಕರೇಇ ॥
ಅಪಣೈ ಹಥಿ ವಡಾಈಆ ಜೈ ಭಾವೈ ತೈ ದೇಹ ॥ ೩೩ ॥

ರಾಮಕಲೀ ದಖಣೀ ಓಅಂಕಾರ.

(೧೪೬)
ಭೂಲಿ ಭೂಲಿ ಮೈ ಫಿರಿ ಪಾಧರೂ ಕಹೈ ನ ಕೋಈ ॥
ಪೂಛಹು ಜಾಇ ಸಿಆಣಿಆ ದುಖು ಕಾಟೈ ಮೇರಾ ಕೋಈ ॥
ಸತಿಗುರು ಸಾಚಾ ಮನಿ ವಸೈ ಸಾಜನು ಉತ ಹೀ ಠಾಇ ॥
ನಾನಕ ಮನು ತೃಪತಾಸೀಐ ಸಿಫತಿ ಸಾಚೇ ನಾಇ ॥ ೧ ॥

ವಾರ ಮಾರೂ ಪಉಡೀ. ೩ ಸಲೋಕ.

(೧೪೭)
ಹುಕಮಿ ರಜಾಈ ಸಾಖತೀ ದರಗಹ ಸಚು ಕಬೂಲು ॥
ಸಾಹಿಬು ಲೇಖಾ ಮಂಗಸೀ ದುನೀಆ ದೇಖಿ ನ ಭೂಲು ॥
ದಿಲ ದರವಾನೀ ಜೋ ಕರೇ ದರವೇಸೀ ದಿಲು ರಾಸಿ ॥
ಇಸಕ ಮುಹಬತಿ ನಾನಕಾ ಲೇಖಾ ಕರತೆ ಪಾಸಿ ॥ ೧ ॥
ಅಲಗಉ ಜೋಇ ಮಧೂಕಡಉ ಸಾರಂಗಪಾಣಿ ಸಬಾಇ ॥
ಹೀರೆ ಹೀರಾ ಬೇಧಿಆ ನಾನಕ ಕಂಠಿ ಸಮಾಇ ॥ ೨ ॥

ವಾರ ಮಾರೂ ಪಉಡೀ ೧೨ ಸಲೋಕ.

(೧೪೮)
ಭೋಲತಣಿ ಭೈ ಮನಿ ವಸೈ ಹೇಕೈ ಪಾಧರ ಹೀಡು ॥
ಅತಿ ಡಾಹಪಣಿ ದುಖು ಘಣೊ ತೀನೆ ಥಾವ ಭರೀಡು ॥ ೧ ॥

ವಾರ ಮಾರೂ ಪಉಡೀ ೧೪ ಸಲೋಕ.

(೧೪೯)
ಅಜರು ಜರೈ ತ ನಉ ಕುಲ ಬಂಧು ॥ ಪೂಜೈ ಪ್ರಾಣ ಹೋವೈ ಥಿರು ಕಂಧು ॥
ಕಹಾ ತೇ ಆಇಆ ಕಹಾ ಏಹುಜಾಣು ॥ ಜೀವತ ಮರತ ರಹೈ ಪರವಾಣು ॥
ಹುಕಮೈ ಬೂಝೈ ತತು ಪಛಾಣೈ ॥ ಇಹು ಪರಸಾದು ಗುರು ತೇ ಜಾಣೈ
ಹೋಂದಾ ಫಡೀಅಗು ನಾನಕ ಜಾಣು ॥ ನಾ ಹಉ ನಾ ಮೈ ಜೂನೀ ಪಾಣು ॥

ವಾರ ಮಲಾರ ಪಉಡೀ ೨೪ ಸಲೋಕ.

ಒಂದು ವೇಳೆ ಅವು ಅತ್ತ-ಇತ್ತ ವೇಗವಾಗಿ ಹೆಚ್ಚು ಖಾದ್ಯಕ್ಕಾಗಿ ಹಾರಿದರೆ ಅವುಗಳ ರೆಕ್ಕೆಗಳು ಮುರಿದು ಹೋಗುವವು ಮತ್ತು ಅವು ಬಲೆಯಲ್ಲಿ ಸಿಗುವವು; ಅವನ್ನು ಅವಗುಣಗಳು ಸಂಕಟದಲ್ಲಿ ನೂಕುವುವು. ಸತ್ಯದ ಆಶ್ರಯ ಪಡೆಯದೆ ಹೇಗೆ ಮುಕ್ತವಾಗುವವು? ಹರಿಯ ಗುಣಗಾನವೇ ಸರ್ವೋತ್ತಮ ಕರ್ಮವು. ಆ ಸ್ವಾಮಿಯೆ ಸರ್ವರ ಶಿರೋಮಣಿ. ಅವನು ಮುಕ್ತಿ ಕೊಡಿಸಿದರೆ ಮುಕ್ತವಾಗುವವು. ಗುರುವಿನ ಕೃಪೆಯಿಂದ ಬಿಡುಗಡೆ ಆಗುವುದು; ಅವನು ಸ್ವತಃ ಕೃಪೆ ತೋರುವನು. ಎಲ್ಲ ವರದಾನಗಳೂ ಅವನ ಬಳಿ ಇರುವವು; ಅವನು ಯಾರ ಮೇಲೆ ಪ್ರಸನ್ನನಾಗುವನೋ ಅವರಿಗೆ ವರಗಳನ್ನು ಕೊಡುವನು.

(೯೩೪)

(೧೪೬)

ಪಥಭ್ರಷ್ಟಳಾಗಿ ತಿರುಗುತ್ತಿರುವೆ ನಾನು; ಯಾರೂ ಮಾರ್ಗವನ್ನು ಸೂಚಿಸಲಿಲ್ಲ. ನನ್ನ ದುಃಖ ಹೇಗೆ ದೂರಾಗುವುದೆಂದು. ಕುಶಲ ಬುದ್ಧಿವಂತರನ್ನು ಕೇಳುತ್ತಲಿದ್ದೆ ಸದ್ಗುರುವು ಸತ್ಯಮನದಲ್ಲಿ ನೆಲಸುವನು; ಅಲ್ಲಿಗೆ ಬಂದು ಪ್ರಿಯತಮನೂ ವಾಸಿಸುವನು. ಸತ್ಯನಾಮದ ಗುಣಗಾನದಿಂದ ಮನವು ತೃಪ್ತವಾಗುವುದು ಎಂದು ನಾನಕನು ಹೇಳುತ್ತಾನೆ.

(೧೦೮೭)

(೧೪೭)

ಪ್ರಭುವಿನ ಹುಕುಮಿನಂತೆ ಈ ಸೃಷ್ಟಿ; ಪ್ರಭುಚರಣಗಳಲ್ಲಿ ಸತ್ಯಕ್ಕೇ ಮಾನ್ಯತೆ. ಸ್ವಾಮಿ ಲೆಕ್ಕ ಕೇಳುತ್ತಾನೆ; ಪ್ರಪಂಚದ ಕಡೆ ನೋಡಿ ಅವನನ್ನು ಮರೆಯಬೇಡ. ಮನದ ಕಾವಲುಗಾರನಾಗಿದ್ದು ಮನವನ್ನು ಸನ್ಮಾರ್ಗದಲ್ಲಿ ನಡೆಸುವವನೇ ದರವೇಶನು (ಫಕೀರನು). ಪ್ರೇಮ ಮತ್ತು ಪ್ರೀತಿಯ ಲೆಕ್ಕವು ಕರ್ತಾರನ ಹತ್ತಿರ ಇರುವುದೆಂದು ನಾನಕನು ಹೇಳುತ್ತಾನೆ. ಮಧುಕರದಂತೆ ಮನವನ್ನು ನಿರ್ಲಿಪ್ತಗೊಳಿಸಿ ನೋಡಿದರೆ ಎಲ್ಲೆಡೆಯಲ್ಲಿ ಪ್ರಭು ಸಾರಂಗಪಾಣಿಯು ಸಿಗುವನು. ವಜ್ರವನ್ನು ವಜ್ರವೇ ಛೇದಿಸುವುದೆಂದೂ, ಮಾಲೆಯಾಗಿ ಕೊರಳಲ್ಲಿ ಶೋಭಿಸುವುದೆಂದೂ ನಾನಕನು ಹೇಳುತ್ತಾನೆ.

(೧೦೯೦)

(೧೪೮)

ಒಂದೇ ಮಾರ್ಗವಿರುವುದು; ನಿರಂಕಾರನ ಭಯವನ್ನೂ ಭೋಳೆತನವನ್ನೂ ಮನದಲ್ಲಿ ನೆಲೆಗೊಳಿಸಿರಿ. ಆ ಹೊಟ್ಟೆಕಿಚ್ಚಿನಲ್ಲಿ ಬಹಳ ದುಃಖವಿರುವುದು. ಅದರಿಂದ ಮನ, ವಚನ, ಕರ್ಮ – ಮೂರೂ ಭ್ರಷ್ಟವಾಗುವವು.

(೧೦೯೦–೯೧)

(೧೪೯)

ಅಸಹನೀಯವನ್ನು ಸಹಿಸಬೇಕು ಬಂಧು, ಒಂಬತ್ತು ದಾರಿಗಳೂ ಬಂದಾಗುವುವು. ಪ್ರಾಣಗಳು ಪ್ರಭುವಿನ ಪೂಜೆಮಾಡಿದಾಗ ತನು ಸ್ಥಿರವಾಗುವುದು. ಎಲ್ಲಿಂದ ಬಂದನು ಎಲ್ಲಿಗೆ ಹೋಗುವನು ಎಂಬುದರ ಚಿಂತೆ ಅವನು ಮಾಡುವುದಿಲ್ಲ. ಜೀವನ ಮತ್ತು ಮರಣದಲ್ಲಿ ಅವನು ಸದಾ ಮಾನ್ಯನು. ಅವನು ಹುಕುಮನ್ನು ಅರಿತಿರುವನು, ತತ್ವವನ್ನು ಗುರುತಿಸಿರುವನು, ಇದೆಲ್ಲವನ್ನೂ ಅರಿತಿರುವನು ಗುರುವಿನ ಪ್ರಸಾದದಿಂದ. 'ನಾನು ಇರುವೆ' ಎಂದು ಯಾವನು ಅನ್ನುವನೊ ಅವನು ಬಂಧಿತನಾಗುವನೆಂದೂ 'ನಾನು ಇಲ್ಲ, ನಾನು ಇಲ್ಲ' ಎಂದು ಯಾವನು ಹೇಳುವನೋ ಅವನು ಆವಾಗ ಸಂಸಾರಚಕ್ರದಲ್ಲಿ ತಿರುಗುತ್ತಿರಲಾರನೆಂದೂ ನಾನಕನು ಹೇಳುತ್ತಾನೆ.

(೧೨೮೯)

## ಝೂಠಾ ಅಗ:ಆ

(೧೫೦)

ಜಾ ಹಉ ನಾಹೀ ತಾ ಕಿಆ ಆಖಾ ಕಿಹು ನಾಹೀ ಕಿಆ ಹೋವಾ ॥
ಕೀತಾ ಕರಣಾ ಕಹಿಆ ಕಥನಾ ಭರಿಆ ಭರಿ ಭರಿ ದೋವಾ ॥
ಆಪಿ ನ ಬುಝಾ ಲೋಗ ಬುಝಾ ಈ ಐಸಾ ಅಗೂ ಹೋವಾ ॥
ನಾನಕ ಅಂಧಾ ಹೋಇ ಕೈದಸೆ ರಾಹೈ ಸಭಸು ಮುಹಾಏ ಸಾಥೈ ॥
ಅಗೈ ಗಇಆ ಮುಹೆ ಮುಹಿ ಪಾಹಿ ಸು ಐಸಾ ಆಗೂ ಜಾಪೈ ॥ ೨ ॥

**ವಾರ ಮಾಝು ಮಹಲಾ ೬ ಸಲೋಕ.**

(೧೫೧)

ಅಂಧಾ ಆಗೂ ಜೆ ಥೀಐ ಕಿಉ ಪಾಧರು ಜಾಣೈ ॥
ಆಪಿ ಮುಸೈ ಮತಿ ಹೋಛೀಐ ಕಿಹು ರಾಹು ಪಛಾಣೈ ॥
ಕಿಉ ರಾಹಿ ಜಾವೈ ಮಹಲು ಪಾವೈ ಅಂಧ ಕೀ ಮತಿ ಅಂಧಲೀ ॥
ವಿಣು ನಾಮ ಹರಿ ಕೇ ಕಛು ನ ಸೂಝೈ ಅಂಧು ಬೂಡೌ ಧಂಧಲೀ ॥
ದಿನು ರಾತಿ ಚಾನಣು ಚಾಉ ಉಪಜೈ ಸಬದು ಗುರಕಾ ಮನಿ ಬಸೈ ॥
ಕರಿ ಜೋಡಿ ಗುರ ಪಹಿ ಕರಿ ವಿನಂತೀ ರಾಹು ಪಾಧರು ಗುರು ದಸೈ ॥ ೬ ॥

**ಸೂಹೀ ಛಂತ.**

## ಮೂರ್ತಿ ಪೂಜಾ

(೧೫೨)

ಹಿಂದು ಭೂಲೇ ಭೂಲೇ ಅಖುಟಿ ಜಾಹೀ ॥ ನಾರದಿ ಕಹಿಆ ಸಿ ಪೂಜ ಕರಾಂಹೀ ॥
ಅಂಧೆ ಗುಂಗೆ ಅಂಧ ಅಂಧಾರು ॥ ಪಾಥರು ಲೇ ಪೂಜಹಿ ಮುಗಧ ಗವಾರ ॥
ಓಹಿ ಜಾ ಆಪಿ ಡುಬೆ ತುಮ ಕಹಾ ತರಣಹಾರು ॥ ೨ ॥

**ವಾರ ಬಿಹಾಗಡಾ ಮಹಲಾ ೨೦ ಸಲೋಕ.**

## ಸುಳ್ಳು (ಢೊಂಗೀ) ಮುಂದಾಳು

(೧೫೦)

ನಾನು ಇಲ್ಲದಿರುವಾಗ ನಾನೇನು ಹೇಳಲಿ? ನಾನು ಏನೂ ಇಲ್ಲದಿದ್ದರೆ ಏನಾಗುವೆನು? ಅವನು ಮಾಡಿದುದು ನನ್ನ ಕರ್ಮ, ಅವನು ಹೇಳಿದುದು ನನ್ನ ಕಥನ. ನಾನು ಮಲದಿಂದ ತುಂಬಿದವನು, ಅದನ್ನು ಕೊಡ ತುಂಬಿ ತುಂಬಿ ತೊಳೆಯುವೆನು. ಸ್ವಂತಕ್ಕೆ ಗೊತ್ತಿಲ್ಲ, ಜನರಿಗೆ ಜ್ಞಾನವನ್ನು ಕೊಡುವವನು — ಇಂಥ ಮುಂದಾಳು ನಾನು. ಸ್ವತಃ ಕುರುಡನಿದ್ದವನು ಮಾರ್ಗದರ್ಶನ ಮಾಡಿದರೆ ಅವನು ಎಲ್ಲ ಸಂಗಾತಿಗಳನ್ನೂ ಮುಳುಗಿಸಿ ಬಿಡುವನು. ಪರಲೋಕದಲ್ಲಿ ಅವನು ಮಣ್ಣು ಮುಕ್ಕಬೇಕಾಗುವುದು; ಇಂಥ ಮುಂದಾಳುಗಳ ಗತಿಯು ಹೀಗೆಯೆ ಆಗುವುದು.

(೧೪೦)

(೧೫೧)

ಮುಂದಾಳು ಕುರುಡನಿದ್ದಾಗ ಮಾರ್ಗದರ್ಶನ ಹೇಗೆ ಮಾಡಬಲ್ಲನು? ಅಲ್ಪಮತಿಯಾಗಿರುವುದರಿಂದ ಸ್ವತಃ ಮೋಸಹೋಗುವ ಅವನು. ಮಾರ್ಗವನ್ನು ಹೇಗೆ ಗುರುತಿಸಬಲ್ಲನು? ಅವನು ಮಾರ್ಗದ ಮೇಲೆ ಹೇಗೆ ನಡೆಯುವನು? ಮನೆಯನ್ನು ಹೇಗೆ ಪಡೆಯುವನು? ಕುರುಡನ ಬುದ್ಧಿಯೂ ಕುರುಡು. ಹರಿನಾಮದ ಹೊರತು ಏನೂ ಹೊಳೆಯುವುದಿಲ್ಲ. ಕುರುಡನು ಪ್ರಾಪಂಚಿಕ ಉದ್ಯೋಗಗಳಲ್ಲಿ ಮುಳುಗಿರುವನು. ಗುರುವಿನ ಶಬ್ದವು ಮನದಲ್ಲಿ ತುಂಬಿದರೆ ಅದು ಸದಾ ಕಾಲವೂ ಪ್ರಕಾಶಮಾನವಾಗುವುದು. ಕೈಜೋಡಿಸಿ ಗುರುವನ್ನು ಬಿನ್ನವಿಸಿಕೊಳ್ಳಿರಿ, ಅವನೇ ನಿಮಗೆ ಮಾರ್ಗವನ್ನು ತೋರಿಸುವನು.

(೭೬೭)

## ಮೂರ್ತಿಪೂಜೆ

(೧೫೨)

ಹಿಂದೂಗಳು ಮರೆತು ಬಿಟ್ಟರು, ಮರೆತುಬಿಟ್ಟರು, ಕುಮಾರ್ಗದಲ್ಲಿ ನಡೆಯತೊಡಗಿದರು. ನಾರದನು ಹೇಳಿದ ಹಾಗೆಯೇ ಮೂರ್ತಿ ಪೂಜೆಯನ್ನು ಮಾಡುತ್ತಿರುವರು. ಮುಗ್ಧ ಅಶಿಕ್ಷಿತರು ಕಲ್ಲನ್ನು ಪೂಜಿಸುವರು. ಸ್ವತಃ ಕುರುಡನೂ ಕಿವುಡನೂ ಆದವನು ಸ್ವತಃ ಗಹನ ಅಂಧಕಾರದಲ್ಲಿ ಮುಳುಗಿರುವನು. ಸ್ವತಃ ಮುಳುಗುತ್ತಿರುವವನು ಹೇಗೆ ನಿಮ್ಮ ಉದ್ಧಾರ ಮಾಡಬಲ್ಲನು?

(೫೫೬)

(೧೫೩)

ಘರಿ ನಾರಾಇಣು ಸಭಾ ನಾಲಿ ॥ ಪೂಜ ಕರೇ ರಖೈ ನಾವಾಲಿ ॥
ಕುಂಗೂ ಚಂನಣು ಫುಲ ಚಡಾಏ ॥ ಪೈರೀ ಪೈ ಪೈ ಬಹುತು ಮನಾಏ ॥
ಮಾಣೂಆ ಮಂಗಿ ಮಂಗಿ ಪೈನ್ಹೈ ಖಾಇ ॥ ಅಂಧೀ ಕಂಮೀ ಅಂಧ ಸಜಾಇ ॥
ಭುಖಿಆ ದೇಹ ನ ಮರದಿಆ ರಖೈ ॥ ಅಂಧಾ ಝಗಡಾ ಅಂಧೀ ಸಥೈ ॥ ೧ ॥

**ವಾರ ಸಾರಂಗ ಪಉಡೀ ೯, ಸಲೋಕ.**

## ನಿರರ್ಥಕ ರೀತಿ ರಿವಾಜ

(೧೫೪)

ಜೇ ಮೋಹಾಕಾ ಘರು ಮುಹೈ ಘರು ಮುಹಿ ಪಿತರೀ ದೇಇ ॥
ಅಗೈ ವಸತು ಸಿಞಾಣೀಐ ಪಿತರೀ ಚೋರ ಕರೇಇ ॥
ವಢೀಅಹಿ ಹಥ ದಲಾಲ ಕೇ ಮುಸಫೀ ಏಹ ಕರೇಇ ॥
ನಾನಕ ಅಗೈ ಸೋ ಮಿಲೈ ಜಿ ಖಟೇ ಘಾಲೇ ದೇಇ ॥ ೧ ॥

**ವಾರ ಆಸಾ ಪಉಡೀ ೧೧ ಸಲೋಕ.**

(೧೫೫)

ದೀವಾ ಮೇರಾ ಏಕು ನಾಮು ದುಖು ವಿಚಿ ಪಾಇಆ ತೇಲು ॥
ಉನಿ ಚಾನಣಿ ಓಹು ಸೋಖಿಆ ಚೂಕಾ ಜಮ ಸಿಉ ಮೇಲು ॥ ೧ ॥
ಲೋಕಾ ಮತ ಕೋ ಫಕಡಿ ಪಾಇ ॥
ಲಖ ಮಡಿಆ ಕರಿ ಏಕಠೇ ಏಕ ರತೀ ಲೇ ಭਾਹਿ ॥ ೧ ॥ ರಹಾಉ ॥
ಪਿಂಡು ಪਤਲਿ ಮೇರೀ ಕੇਸਉ ಕਿਰਿಆ ਸਚੁ ਨਾਮੁ ಕರತಾರು ॥
ಐਥੈ ಓಥੈ ಆਗੈ ಪਾਛੈ ಏಹು ಮೇರਾ ಆਧਾਰು ॥ ೨ ॥
ಗಂಗ ಬਨਾਰਸਿ ಸਿਫਤਿ ತುಮਾਰੀ ನਾਵੈ ಆਤਮ ರਾਉ ॥
ಸಚਾ ನਾਵਣੁ ತਾಂ ಥೀಐ ಜਾਂ ಅਹਿਨਿಸਿ ಲਾਗೈ ಭਾਉ ॥ ೩ ॥
ಇಕ ಲੋਕೀ ಹੋਰು ಛਮਿಛਰੀ ಬ੍ਰಾಹಮಣು ವਟਿ ಪਿಂಡು ಖಾಇ ॥
ನਾನಕ ಪਿಂಡು ಬਖਸੀਸ ಕਾ ಕಬಹੂ ನਿਖੂਟਸਿ ನਾಹਿ ॥ ೪ ॥ ೧೨ ॥ ೩೨ ॥

**ಆಸಾ.**

(೧೫೬)

ಜੇ ಕਰਿ ಸೂತಕੁ ಮੰਨੀಐ ಸਭ ತੈ ಸೂತಕੁ ಹੋಇ ॥
ಗੋਹੇ ಅತੈ ಲಕಡೀ ಅಂਦਰਿ ಕੀಡಾ ಹੋಇ ॥

(೧೫೩)

ಮನೆಯಲ್ಲಿ ನಾರಾಯಣನ ಮೂರ್ತಿ ಜೊತೆಯಲ್ಲಿ ಎಲ್ಲ ಸಭಾಸದರ ಮೂರ್ತಿಗಳು. ವ್ಯಕ್ತಿ ಇವಕ್ಕೆ ಸ್ನಾನ ಮಾಡಿಸಿ ಪೂಜಿಸುವವನು. ಅದಕ್ಕೆ ಕೇಶರ, ಚಂದನ, ಹೂವುಗಳನ್ನು ಅರ್ಪಿಸುವವನು ಚರಣವಂದನೆ ಮಾಡಿ ಅವನ್ನು ಪ್ರಸನ್ನಗೊಳಿಸುವವನು. ಆದರೂ ಮಾನವರಿಂದ ಭಿಕ್ಷೆಬೇಡಿ ತಿನ್ನುವನು. ಕುರುಡು ಕರ್ಮಗಳಿಗೆ ಕುರುಡು ಸಜೆ. ಈ ಮೂರ್ತಿ ಮಾಲೆಯು ಹಸಿದವರಿಗೆ ಅನ್ನವನ್ನು ಕೊಡಲಾರದು; ಸಾಯುವವರನ್ನು ಬದುಕಿಸಲಾರದು; ಕುರುಡರ ಸಭೆಯಲ್ಲಿ ಕುರುಡ ಜಗಳ ನಡೆದೇ ಇರುವುದು.

(೧೨೪೦)

## ನಿರರ್ಥಕ ರೀತಿ—ಪದ್ಧತಿ

(೧೫೪)

ಯಾವನಾದರೂ ಲೂಟಿಗಾರನು ಯಾರ ಮನೆಯನ್ನಾದರೂ ಲೂಟಿ ಮಾಡಿ ಪಿತೃಗಳಿಗೆ ಕಳವಿನ – ವಸ್ತುಗಳನ್ನು ಅರ್ಪಿಸಿದರೆ ಆ ವಸ್ತುಗಳನ್ನು ಪರಲೋಕದಲ್ಲಿ ಗುರುತಿಸಲಾಗುವುದು. ಪಿತೃಗಳು ಕಳ್ಳರೆನಿಸುವರು; ದಲಾಲನ ಕೈಗಳನ್ನು ಕತ್ತರಿಸಲಾಗುವುದು. ಹೀಗಾಗುವುದು ಅಲ್ಲಿ ನ್ಯಾಯ. ಶ್ರಮದಿಂದ ಯಾವುದನ್ನು ಗಳಿಸಿ ದಾನ ಕೊಡಲಾಗುವುದೋ ಅದೇ ಪರಲೋಕದಲ್ಲಿ ದೊರೆಯುವುದು ಎಂದು ನಾನಕನು ಹೇಳುತ್ತಾನೆ.
(೪೭೨)

(೧೫೫)

ಕೇವಲ ನಾಮವೊಂದೇ ನನ್ನ ದೀಪ; ಅದರಲ್ಲಿ ದುಃಖದ ಎಣ್ಣೆ ಹಾಕಿರುವೆನು. ದೀಪವು ಬೆಳಕು ಕೊಟ್ಟಿತು, ಎಣ್ಣೆಯೆಲ್ಲ ತೀರಿಹೋಯಿತು. ಯಮನೊಡನೆ ಭೇಟಿ ತಪ್ಪಿತು. ಜನರೇ, ನಿರರ್ಥಕ ನಡತೆ – ನಡಾವಳಿ ನಡೆಸಬೇಡಿರಿ. ಲಕ್ಷಾಂತರ ಕಟ್ಟಿಗೆಯ ತುಂಡುಗಳನ್ನು ಒಟ್ಟಿಗೆ ಸುಡುವ ಶಕ್ತಿ ಒಂದು ಕಿಡಿಯಲ್ಲಿರುವುದು. ಕೇಶವನೇ ನನಗೆ ಪಿಂಡ – ಪತ್ರಾವಳಿ, ಸತ್ಯನಾಮವೇ ನನಗೆ ಕ್ರಿಯಾಕರ್ಮ; ಕರ್ತಾರನು ಇಲ್ಲಿ, ಅಲ್ಲಿ, ಹಿಂದೆ, ಮುಂದೆ ಇರುವವನು, ಅವನೇ ನನಗೆ ಆಧಾರ. ನಿನ್ನ ಸ್ತುತಿಯೆ ನನಗೆ ಗಂಗೆ ಮತ್ತು ಕಾಶಿ ಎನಿಸುವುದು; ಇದರಲ್ಲಿಯೆ ನನ್ನ ಆತ್ಮವು ಮೀಯುವುದು. ನಾನು ಹಗಲು ರಾತ್ರಿ ನಿನ್ನ ಪ್ರೇಮದಲ್ಲಿ ಲೀನವಾಗಿರುವುದೇ ನಿಜವಾದ ಸ್ನಾನ. ಪಿಂಡವು ಕೆಲವು ದೇವತೆಗಳ ನಿಮಿತ್ತ ಇರುವುದು, ಕೆಲವು ಪಿತೃಗಳ ನಿಮಿತ್ತವಾಗಿರುವುದು; ಬ್ರಾಹ್ಮಣರು ಮಾಡುವರು ಮತ್ತು ತಿಂದುಹೋಗುವರು. ಅವನ ಪ್ರಸಾದದ ಪಿಂಡವು ಅಕ್ಷುಣ್ಣವಾದುದು ಎಂದು ನಾನಕನು ಹೇಳುತ್ತಾನೆ.

(೩೫೮)

(೧೫೬)

ಸೂತಕವನ್ನು ಒಪ್ಪಿದರೆ ಎಲ್ಲ ಕಡೆಗೂ ಸೂತಕವಿರುವುದು. ಕುರುಳು ಮತ್ತು ಕಟ್ಟಿಗೆಯಲ್ಲಿ ಹುಳಗಳು ಇರುವವು. ಧ್ಯಾನದ ಎಷ್ಟು ಕಾಳುಗಳು ಇವೆಯೊ ಅವು ಯಾವುವೂ ಜೀವಗಳಿಂದ ರಹಿತವಾಗಿರುವುದಿಲ್ಲ.

ಜೇತೆ ದಾಣೆ ಅಂನ ಕಿ ಜೀಆ ಬಾಝು ನ ಕೋಇ ॥
ಪಹಲಾ ಪಾಣೀ ಜೀಉ ಹೈ ಜಿತು ಹರಿಆ ಸಭು ಕೋಇ ॥
ಸೂತಕು ಕಿಉ ಕರಿ ರಖೀಐ ಸೂತಕು ಪವೈ ರಸೋಇ ॥
ನಾನಕ ಸೂತಕು ಏವ ನ ಉತರೈ ಗಿಆನು ಉತಾರೈ ಧೋಇ ॥ ೧ ॥
ಮನ ಕಾ ಸೂತಕು ಲೋಭು ಹೈ ಜಿಹವಾ ಸೂತಕು ಕೂಡು ॥
ಅಖೀ ಸೂತಕು ವೇಖಣಾ ಪರ ತ್ರಿಅ ಪರಧನ ರೂಪು ॥
ಕಂನೀ ಸೂತಕು ಕಂನಿ ಪೈ ಲಾಇತಬಾರೀ ಖಾಹಿ ॥
ನಾನಕ ಹಂಸಾ ಆದಮೀ ಬಧೇ ಜಮಪುರಿ ಜಾಹಿ ॥ ೨ ॥
ಸಭೋ ಸೂತಕು ಭರಮು ಹೈ ದೂಜೈ ಲಗೈ ಜಾಇ ॥
ಜಂಮಣು ಮರಣಾ ಹುಕಮು ಹೈ ಭಾಣೈ ಆವೈ ಜಾಇ ॥
ಖಾಣಾ ಪೀಣಾ ಪವಿತ್ರು ಹೈ ದಿತೋನು ರಿಜಕು ਸಂಬಾಹಿ ॥
ನಾನಕ ಜಿನೀ ಗುರಮುಖಿ ಬುಝಿಆ ತಿನ್ಹಾ ಸೂತಕು ನಾಹಿ ॥ ೩ ॥

**ವಾರ ಆಸಾ ಪಉಡೀ ೧೮ ಸಲೋಕ.**

(೧೫೭)

ನಾವಣ ಚಲೆ ತೀರಥೀ ಮನಿ ಖೋಟೈ ತನಿ ಚೋರ ॥
ಇಕು ಭಾਉ ਲಥੀ ನಾತಿਆ ದੁਇ ಭਾ ಚಡਿ ਅਸੁ ಹੋರ ॥
ಬಾಹರಿ ಧੋತೀ ತೂಮಡೀ ಅಂದರಿ ವಿਸੁ ನਿਕੋರ ॥
ಸಾಧ ಭಲೆ ಅಣನಾತಿಆ ಚೋರ ಸਿ ಚೋರಾ ಚೋರ ॥

**ವಾರ ಸೂಹೀ ಪಉಡೀ ೧೨ ಸಲೋಕ.**

(೧೫೮)

ಸುಇನೆ ಕಾ ಚਉಕਾ ಕಂಚನ ಕੁਆರ ॥ ರೂಪೆ ಕੀਆ ಕਾರ ಬಹುತು ಬਿਸਥਾರੁ ॥
ಗಂಗಾಕಾ ಉದಕ ಕਰੰਤੇ ಕੀ ಆਗਿ ॥ ಗਰੁਡਾ ಖਾಣਾ ಧੁಧ ಸਿਉ ಗਾਡਿ ॥ ೧ ॥
ರೇಮನ ಲೇಖੈ ಕਬਹੁ ನ ಪਾਇ ॥ ಜਾਮਿ ನ ಭੀਜੈ ಸਾಚ ನਾਇ ॥ ೧ ॥ ರಹಾਉ ॥
ದಸಅਠ ಲੀಖੈ ಹೋਵਹਿ ಪਾਸਿ ॥ ಚਾਰੇ ವੇದ ಮੁಖਾਗਰ ಪਾਠਿ ॥
ಪುರಬೀ ನਾਵੈ ವರನਾ ಕੀ ದਾਤਿ ॥ ವರਤ ನੇਮ ಕਰੇ ದਿਨ ರਾਤਿ ॥ ೨ ॥
ಕਾਜೀ ಮੁਲਾ ಹੋਵಹਿ ಸੇਖ ॥ ಜੋਗੀ ಜಂਗਮ ಭਗವੈ ಭೇਖ ॥
ಕੋ ಗਿਰਹੀ ಕਰਮਾ ಕੀ ಸಂਧਿ ॥ ಬਿਨੁ ಬੂਝੇ ಸಭ ಖਡੀਅਸਿ ಬੰਧਿ ॥ ೩ ॥

ನೀರು ಸ್ವತಃ ಜೀವವುಳ್ಳದ್ದು. `ಆದರಿಂದಲೇ ಈ ಎಲ್ಲ ಹಸಿರುಮುಡಿಯುವ ಜಗತ್ತು. ಸೂತಕವು ಅಡಿಗೆಯಲ್ಲೂ ಉಂಟು; ಸೂತಕದಿಂದ ಹೇಗೆ ಬಿಡುಗಡೆ ? ಅದು ಹೀಗೆ ತಪ್ಪುವುದಿಲ್ಲ. ಜ್ಞಾನದಿಂದ ತೊಳೆದು ಹೋಗುವುದು, ಜ್ಞಾನದಿಂದ ಬಿಟ್ಟು ಹೋಗುವುದು ಎಂದು ನಾನಕನು ಹೇಳುತ್ತಾನೆ. ಮನದ ಸೂತಕ ಲೋಭ. ನಾಲಗೆಯ ಸೂತಕ ಸುಳ್ಳು, ಪರನಾರಿಯನ್ನು ನೋಡುವುದು ಕಣ್ಣುಗಳ ಸೂತಕ, ಪರಧನ, ಪರರೂಪಗಳು ಕಣ್ಣಿನ ಸೂತಕ. ನಿಂದೆ ಮತ್ತು ಚಾಡಿ ಕಿವಿಗಳ ಸೂತಕ. ಇವೆಲ್ಲ ಸೂತಕ ಹಚ್ಚಿಕೊಂಡ ಮನುಷ್ಯನನ್ನು ಯಮಪುರಿಗೆ ಒಯ್ಯುವರೆಂದು ನಾನಕನು ಹೇಳುತ್ತಾನೆ. ಸೂತಕದ ವಿಚಾರವೆಲ್ಲವೂ ಒಂದು ಭ್ರಮೆ. ಅದರಿಂದ ನಾವು ದ್ವೈತದ ಕಡೆಗೆ ಉನ್ಮುಖರಾಗಿ ತಿರುಗುವೆವು. ಜನ್ಮ – ಮರಣಗಳು ಪ್ರಭುವಿನ ಅಪ್ಪಣೆಯ ಮೇರೆಗೆ ಆಗುವುವು. ಪ್ರಭುವಿನ ಇಚ್ಛೆಯ ಮೇರೆ ಜೀವಗಳ ಆಪಾಗಮನ, ಖಾನಪಾನ, ಪವಿತ್ರ. ಅವನೇ ಹೊಟ್ಟೆತುಂಬಿಕೊಳ್ಳಲು ಎಲ್ಲವನ್ನು ಕೊಟ್ಟನು. ಗುರುವಿನ ಉಪದೇಶದಿಂದ ಯಾರಿಗೆ ಜ್ಞಾನವುಂಟಾಗಿದೆಯೋ ಅವರಿಗೆ ಸೂತಕ ತಗಲುವುದಿಲ್ಲ ಎಂದು ಗುರುನಾನಕನು ಹೇಳುತ್ತಾನೆ.

(೪೭೨–೭೩)

(೧೫೭)

ಮನಸ್ಸಿನಲ್ಲಿ ಖೊಟ್ಟಿತನ, ಮೋಸಗಾರಿಕೆ, ತನುವಿನಲ್ಲಿ ಕಳ್ಳತನ ಮೈಗಳ್ಳತನ ಇಟ್ಟುಕೊಂಡು ತೀರ್ಥಕ್ಷೇತ್ರಗಳಲ್ಲಿ ಸ್ನಾನ ಮಾಡಲು ಹೊರಟಿರಿ. ಆದರೆ ಅಲ್ಲಿ ಸ್ನಾನ ಮಾಡುವುದರಿಂದ ಎಷ್ಟು ಹೊಲಸು ತೊಳೆದು ಹೋಗಬೇಕಾಗಿತ್ತೋ ಅಷ್ಟು ತೊಳೆದು ಹೋಗಲಿಲ್ಲ. ಅದರ ಇಮ್ಮಡಿ ಹೊಲಸು ನಿಮ್ಮ ಮೇಲೆ ಹತ್ತಿತು. ಈಸು—ಕಹಿ ಕುಂಬಳಕಾಯಿಯನ್ನು ನೀವು ಹೊರಗಿನಿಂದ ಬೇಕಾದಷ್ಟು ತೊಳೆಯಿರಿ, ಆದರೆ ಅದರಲ್ಲಿ ಒಳಗೆ ವಿಷವು ತುಂಬೇ ಇರುವುದು; ಸ್ನಾನವಮಾಡದಿದ್ದರೂ ಸಾಧು ಸಾಧುವೇ. ಪವಿತ್ರನೇ; ಆದರೆ ಕಳ್ಳರು ಸ್ನಾನ ಮಾಡಿದ ಮೇಲೂ ಕಳ್ಳರೇ.

(೭೮೯)

(೧೫೮)

ಊಟಕ್ಕಾಗಿ ಬಂಗಾರದ ಮಡಿ ಜಾಗ, ಬಂಗಾರದ ತಟ್ಟೆ, ಬೆಳ್ಳಿಯ ರೇಖೆಗಳು ವಿಸ್ತರವಾಗಿ ಇದ್ದರೂ, ಗಂಗೆಯ ಜಲ, ಅರಳಿಕಟ್ಟಿಗೆಯ ಬೆಂಕಿ ಮತ್ತು ಹಾಲಿನಲ್ಲಿ ಬೇಯಿಸಿದ ಭೋಜನ ಇದ್ದರೂ, ಮನವೇ ಎಲ್ಲಿಯ ವರೆಗೆ ಸತ್ಯನಾಮದಲ್ಲಿ ನೀನು ತಲ್ಲೀನವಾಗಿರುವುದಿಲ್ಲವೋ ಅಲ್ಲಿಯ ವರೆಗೆ ಈ ಮಡಿ, ಈ ಶುಚಿತ್ವದಿಂದೇನು ಲಾಭ ? ಹದಿನೆಂಟು ಪುರಾಣಗಳು ಲಿಖಿತವಾಗಿ ಬಳಿಯಲ್ಲಿ ಇದ್ದರೆ, ನಾಲ್ಕೂ ವೇದಗಳು ಬಾಯಿಪಾಠ ಇದ್ದರೆ, ಪರ್ವಸ್ನಾನ ಮಾಡಿದರೆ, ವರ್ಣಕ್ಕೆ ಅನುಸಾರವಾಗಿ ದಾನ ಮಾಡಿದರೆ, ಹಗಲು–ರಾತ್ರ ವ್ರತ ನಿಯಮಗಳ ಪಾಲನೆ ಮಾಡಿದರೆ ಏನು ಪ್ರಯೋಜನ–ಮನವು ಸತ್ಯನಾಮದಲ್ಲಿ ಲೀನವಾಗದಿದ್ದರೆ ? ಕಾಜಿ ಇರಲಿ, ಮುಲ್ಲಾ ಇರಲಿ, ಶೇಖ ಇರಲಿ, ಕಾಷಾಯ ವಸ್ತ್ರದಲ್ಲಿ ಯೋಗಿ ಇರಲಿ, ಜಂಗಮ ಇರಲಿ, ಅಥವಾ ಗೃಹಸ್ಥ ಇರಲಿ—ಅವರು ಕರ್ಮಕಾಂಡಗಳಲ್ಲಿ ತೊಡಗಿರಲಿ, ಪ್ರಭುವನ್ನು ಅರಿಯದಿದ್ದರೆ

ಜೇತೆ ಜೇಅ ಲಿಖೀ ಸಿರಿ ಕಾರ ॥ ಕರಣೀ ಉಪರಿ ಹೋವಗಿ ಸಾರ ॥
ಹುಕಮು ಕರಹಿ ಮೂರಖ ಗವಾರ ॥ ನಾನಕ ಸಾಚೆ ಕೇ ಸಿಫತಿ ಭಂಡಾರ ॥ ೪ ॥

ಬಸಂತು.

(೧೫೯)

ಧೃಗು ತಿನಾ ಕಾ ಜೀವಿಆ ಜಿ ಲಿಖಿ ಲಿಖಿ ವೇಚಹಿ ನಾಉ ॥
ಖೇತಿ ಜಿನ ಕೀ ಉಜಡೈ ಖಲವಾಡೆ ಕಿಆ ಥಾಉ ॥
ಸಚೈ ಸರಮೈ ಬಾಹರೈ ಅಗೈ ಲಹಹಿ ನ ದಾದಿ ॥
ಅಕಲಿ ಏಹ ನ ಆಖೀಐ ಅಕಲಿ ಗವಾಈಐ ಬಾದಿ
ಅಕಲೀ ಸಾಹಬು ಸೇವೀಐ ಅಕಲಿ ಪಾಈಐ ಮಾನು ॥
ಅಕಲೀ ಪಢಿ ಕೈ ಬುಝೀಐ ಅಕಲೀ ಕೀಚೈ ದಾನು ॥
ನಾನಕು ಆಖೈ ರಾಹು ಏಹು ಹೋರಿ ಗಲಾ ಸೈತಾನು ॥ ೧ ॥

ವಾರ ಸಾರಂಗ ಪಉಡೀ ೨೦ ಸಲೋಕ.

(೧೬೦)

ಗಿಆನ ವಿಹೂಣಾ ಗಾವೈ ಗೀತ ॥ ಭುಖೆ ಮುಲಾ ಘರೆ ಮಸೀತಿ ॥
ಮಖಟೂ ಹೋಇಕೈ ಕಂನ ಪಡಾಏ ॥ ಫಕರು ಕರೆ ಹೋರು ಜಾತು ಗವಾಏ ॥
ಗುರು ಪೀರು ಸದಾಏ ಮಂಗಣ ಜಾಇ ॥ ತಾ ಕೈ ಮೂಲಿ ನ ಲಗೀಐ ಪಾಇ ॥
ಘಾಲಿ ಖಾಇ ಕಿಛು ಹಥಹು ದೇಇ ॥ ನಾನಕ ರಾಹು ಪಛಾಣಹಿ ಸೇಇ ॥೧ ॥

ವಾರ ಸಾರಂಗ ಪಉಡೀ ೨೨ ಸಲೋಕ.

(೧೬೧)

ಗಊ ಬಿರಾಹಮಣ ಕಉ ಕರು ಲಾವಹು ಗೋಬರಿ ತರಣು ನ ಜಾಈ ॥
ಧೋತೀ ಟಿಕಾ ತೈ ಜಪಮಾಲೀ ಧಾನು ಮಲೇಛಾ ಖಾಈ ॥
ಅಂತರಿ ಪೂಜಾ ಪಡಹಿ ಕತೇಬಾ ಸಂಜಮು ತುರಕಾ ಭಾಈ ॥
ಛೋಡೀಲೆ ಪಾಖಂಡಾ ॥ ನಾಮಿ ಲಇಐ ಜಾಹಿ ತರಂದಾ ॥ ೧ ॥

ವಾರ ಆಸಾ ಪಉಡೀ ೧೬ ಸಲೋಕ.

ಎಲ್ಲರನ್ನೂ ಬಂಧಿಸಿ ಒಯ್ಯಲಾಗುವುದು. ಎಷ್ಟು ಜೀವರು ಇದ್ದಾರೊ ಅಷ್ಟೇ ಕರ್ಮಗಳು ಅವರ ಹಣೆಯಲ್ಲಿ ಬರೆದಿರುವುದರಿಂದ ಅವರ ಕರ್ಮಾನುಸಾರ ನಿರ್ಣಯವಾಗುವುದು. ಇನ್ನೊಬ್ಬರ ಮೇಲೆ ಹುಕುಮ್ ನಡೆಸುವವರು ಮೂರ್ಖರು, ಅಶಿಕ್ಷಿತರು; ಪ್ರಭುವಿನ ಗುಣಗಳ ಭಾಂಡಾರವನ್ನು ಹುಡುಕಿಕೊಳ್ಳಿರಿ ಎಂದು ನಾನಕನು ಹೇಳುತ್ತಾನೆ.

(೧೧೬೯)

(೧೫೫)

ಪ್ರಭುವಿನ ಹೆಸರು ಬರೆಬರೆದು ಮಾರುವವರಿಗೆ ಧಿಕ್ಕಾರ. ಯಾರ ಹೊಲವೇ ಹಾಳಾಗಿ ಹೋಯಿತೊ ಅವರಿಗೆ ಕಣದಲ್ಲಿ ಸ್ಥಾನವೆಲ್ಲಿ? ಯಾರ ಬಳಿ ಸತ್ಯವಿಲ್ಲವೋ ನಾಚಿಕೆಯಿಲ್ಲವೊ ಅವರಿಗೆ ಪರಲೋಕದಲ್ಲಿ ಆದರವೆಲ್ಲಿ? ಬುದ್ಧಿಯನ್ನು ವಿವಾದದಲ್ಲಿ ಕಳೆದುಕೊಂಡವನು ಹೇಗೆ ಬುದ್ಧಿವಂತನು? ಬುದ್ಧಿಯಿಂದಾಗುವುದು ಸ್ವಾಮಿಯ ಸೇವೆ, ಬುದ್ಧಿಯಿಂದ ಸಿಗುವುದು ಸನ್ಮಾನ. ಬುದ್ಧಿಯಿಂದಲೇ ಓದುವರು, ಓದಿ ಅದನ್ನು ಅರಿಯುವರು; ಬುದ್ಧಿಯಿಂದಲೇ ದಾನ ಮಾಡುವರು. ಇದು ಒಂದೇ ಮಾರ್ಗವು, ಬೇರೆ ಮಾರ್ಗಗಳೆಲ್ಲವೂ ಶೈತಾನನವು ಎಂದು ನಾನಕನು ಹೇಳುತ್ತಾನೆ.

(೧೨೪೫)

(೧೬೦)

ಸ್ವತಃ ಜ್ಞಾನಶೂನ್ಯನು; ಆದರೆ ಜ್ಞಾನಗೀತವನ್ನು ಹಾಡುವವನು. ಹಸಿದ ಮುಲ್ಲಾ ಮನೆಯಲ್ಲಿಯೆ ಮಸೀದೆಯನ್ನು ಮಾಡಿಕೊಳ್ಳುವನು. ಹೊಟ್ಟೆಯ ಪಾಡಿಗಾಗಿ ದುಡಿಯಲಾರ, ಆದ್ದರಿಂದ ಕಿವಿಯಲ್ಲಿ ಕುಂಡಲ ಹಾಕಿಕೊಂಡು ಫಕೀರನಾಗಿ ಮಾನ ಮರ್ಯಾದೆಯನ್ನು ಕಳೆದುಕೊಂಡನು. ಗುರು, ಪೀರ ಎನಿಸಿಕೊಂಡು ಮನೆ ಮನೆಗೆ ಹೋಗಿ ಬೇಡುತ್ತ ಹೊರಟನು; ಇಂಥ ಗುರು, ಪೀರರ ಕಾಲನ್ನು ಹಿಡಿಯಬೇಡಿರಿ. ದುಡಿಯಿರಿ, ತಿನ್ನಿರಿ, ಉಣ್ಣಿರಿ, ದಾನವನ್ನು ಮಾಡಿರಿ; ಹೀಗೆ ದುಡಿದುಣ್ಣುವ ಹಾಗೂ ದಾನಮಾಡುವ ವ್ಯಕ್ತಿಗಳೇ ಪ್ರಭುಪ್ರಾಪ್ತಿಯ ಮಾರ್ಗವನ್ನು ಗುರುತಿಸುವರು ಎಂದು ನಾನಕನು ಹೇಳುತ್ತಾನೆ.

(೧೨೪೫)

(೧೬೧)

ಗುರು ಮತ್ತು ಬ್ರಾಹ್ಮಣರ ಮೇಲೆ ಕರ ಹೇರುವಿರಿ. ಆದರೆ ಸಗಣಿಯ ಸಹಾಯದಿಂದ ನೀವು ಪಾರಾಗಲಾರಿರಿ. ಸಗಣಿಯು ನಿಮ್ಮನ್ನು ಪವಿತ್ರ ಮಾಡಲಾರದು. ನೀವು ಧೋತರ ಉಟ್ಟಿರುವಿರಿ, ಹಣೆಯ ಮೇಲೆ ಗಂಧ ತಿಲಕ ಹಚ್ಚಿಕೊಂಡಿರುವಿರಿ, ಆದರೆ ಮ್ಲೇಚ್ಛರು ಕೊಟ್ಟ ಧಾನ್ಯವನ್ನು ಉಣ್ಣುವಿರಿ. ಮನೆಯಲ್ಲಿ ಪೂಜೆ ಮಾಡುವಿರಿ, ಹೊರಗಡೆಯಲ್ಲಿ ಕುರಾಣ ಓದುವಿರಿ. ಎಲ್ಲಾ ನಡತೆ ನಡಾವಳಿ, ರೀತಿ-ನೀತಿ ತುರಕರದು. ಈ ತೋರಿಕೆ ಆಡಂಬರ ಎಲ್ಲಾ ಬಿಟ್ಟುಬಿಡಿ. ಪ್ರಭುವಿನ ನಾಮವನ್ನು ತೆಗೆದುಕೊಳ್ಳಿರಿ, ಅಂದರೆ ಭವಸಾಗರದಿಂದ ಪಾರುಗಾಣುವಿರಿ. ಪ್ರಭುನಾಮವೇ ತಾರಕ.

(೪೭೧)

ಭಾಗ ಐದು

# ಆತ್ಮೋನ್ನತಿ ಕೇ ಲಿಏ ಪಾರಿವಾರಿಕ ಜೀವನ ಕಾ ತ್ಯಾಗ ಅಪೇಕ್ಷಿತ ನಹೀ

## ಆತ್ಮೋನ್ನತಿಗಾಗಿ ಪಾರಿವಾರಿಕ ಜೀವನವನ್ನು ತಜ್ಯಿಸುವುದು ಅಪೇಕ್ಷಣೀಯವಲ್ಲ

**ಸಚಿ ಸಿಮರಿಐ ಹೋವೈ ಪರಗಾಸು ॥ ತಾತೆ ಬಿಖಿಆ ಮಹಿ ರಹೈ ಉದಾಸು ॥**
**ಸತಿಗುರ ಕೀ ಐಸೀ ಬಡಿಆಈ । ಪುತ್ರ ಕಲತ್ರ ವಿಚೆ ಗತಿ ಪಾಈ ॥ ೨ ॥ ೩ ॥ ೪ ॥[1]**

**ಧನಾಸರೀ.**

1 ಸತ್ಯದ ಸ್ಮರಣೆಯಿಂದ ಮನದಲ್ಲಿ ಬೆಳಕು ಬೀಳುವುದು. ವಿಷಯಗಳು ಸುತ್ತುವರಿದಿದ್ದರೂ ನಿರ್ಲಿಪ್ತನಾಗಿರುವನು. ಸದ್ಗುರುವಿನ ಮಹಿಮೆ ಇಂತಹದು. ಪತ್ನಿ—ಪುತ್ರರರ ಕೂಡ ಇರುತ್ತಿದ್ದರೂ ಮುಕ್ತಿ ದೊರೆಯುವುದು.

## ಸ್ತ್ರೀ ನೀಚ ನಹೀ

(೧೬೨)

ಭಂಡಿ ಜಂಮೀಐ ಭಂಡಿ ನಿಂಮೀಐ ಭಂಡಿ ಮಂಗಣು ವಿಆಹು ॥
ಭಂಡಹು ಹೋವೈ ದೋಸತೀ ಭಂಡಹು ಚಲೈ ರಾಹು ॥
ಭಂಡು ಮುಆ ಭಂಡು ಭಾಲೀಐ ಭಂಡಿ ಹೋವೈ ಬಂಧಾನು ॥
ಸೋ ಕಿಉ ಮಂದಾ ಆಖೀಐ ಜಿತು ಜಂಮಹಿ ರಾಜಾನ ॥
ಭಂಡಹು ಹೀ ಭಂಡು ಉಪಜೈ ಭಂಡೈ ಬಾಝು ನ ಕೋಇ ॥
ನಾನಕ ಭಂಡೈ ಬಾಹರಾ ಏಕೋ ಸಚಾ ಸೋಇ ॥
ಜಿತು ಮುಖಿ ಸದಾ ಸಾಲಾಹೀಐ ಭಾಗಾ ರತೀ ಚಾರಿ ॥
ನಾನಕ ತೇ ಮುಖ ಊಜಲೆ ತಿತು ಸಚೆ ದರಬಾರಿ ॥ ೨ ॥

**ವಾರ ಆಸಾ ಮಹಲಾ ೧ ಸಲೋಕ.**

## ತ್ಯಾಗ

**(ಯೋಗಿಯೋಂಕೇ ಸಾಥ ಚರ್ಚಾ)**

(೧೬೩)

ದುನೀ ಆ ಸಾಗರು ದುತರು ಕಹೀಐ ಕಿಉಕರಿ ಪಾಈಐ ಪಾರೋ ॥
ಚರಪಟು ಬೋಲೈ ಅಉಧೂ ನಾನಕ ದೇಹು ಸಚಾ ಬೀಚಾರೋ ॥
ಆಪೆ ಆಖೈ ಆಪೆ ಸಮಝೈ ತಿಸು ಕಿಆ ಉತರು ದೀಜೈ ॥
ಸಾಚು ಕಹಹು ತುಮ ಪಾರಗರಾಮೀ ತುಝುಕಿಆ ಬೈಸಣು ದೀಜೈ ॥ ೪ ॥
ಜೈಸೆ ಜಲ ಮಹಿ ಕಮಲು ನಿರಾಲಮು ಮುರಗಾಈ ನೈಸಾಣೆ ॥
ಸುರತಿ ಸಬದಿ ಭವಸಾಗರು ತರೀಐ ನಾನಕ ನಾಮು ವಖಾಣೆ ॥
ರಹಹಿ ಇಕಾಂತಿ ಏಕೊ ಮನಿ ವಸಿಆ ಆಸಾ ಮಾಹಿ ನಿರಾಸೋ ॥
ಅಗಮು ಅಗೋಚರು ದೇಖಿ ದಿಖಾಏ ನಾನಕು ತಾ ಕಾ ದಾಸೋ ॥ ೫ ॥

**ರಾಮಕಲೀ ಸಿಧ ಗೋಸಟಿ.**

(೧೬೪)

ಹಾಟೀ ಬಾಟೀರಹಹಿ ನಿರಾಲೆ ರೂಖಿ ಬಿರಖಿ ಉದಿಆನೆ ॥
ಕಂದ ಮೂಲು ಅಹಾರೊ ಖಾಈಐ ಅಉಧೂ ಬೋಲೈ ಗಿಆನೆ ॥
ತೀರಥಿ ನಾಈಐ ಸುಖು ಫಲು ಪಾಈಐ ಮೈಲು ನ ಲಾಗೈ ಕಾಈ ॥
ಗೋರಖಪೂತು ಲೋಹಾರೀಪಾ ಬೋಲೈ ಜೋಗ ಜುಗತಿ ವಿಧಿ ಸಾಈ ॥ ೭ ॥

## ಹೆಣ್ಣು ಕೀಳಲ್ಲ

(೧೬೨)

ಹೆಣ್ಣಿನಿಂದ ಹುಟ್ಟು, ಹೆಣ್ಣಿನ ಹೊಟ್ಟೆಯಲ್ಲೇ ಪಾಲನೆ; ಹೆಣ್ಣಿನೊಡನೆ ನೆಂಟಸ್ತನ ಮಾಡಿದೆವು, ಮದುವೆ ಯಾದೆವು. ಹೆಣ್ಣಿನಿಂದ ಜಗತ್ತಿನೊಡನೆ ಮೈತ್ರಿ. ಹೆಣ್ಣಿನಿಂದ ಮುಂದುವರಿಯುವುದು ವಂಶ. ಒಂದು ಹೆಣ್ಣು ಸತ್ತರೆ ಇನ್ನೊಂದು ಹೆಣ್ಣನ್ನು ಹುಡುಕುವೆವು. ಹೆಣ್ಣಿನಿಂದಲೆ ಮಾನ ಸಮ್ಮಾನ ದೊರೆಯುವುದು. ಹೆಣ್ಣಿಗೆ ಅಪಶಬ್ದ ಏಕೆ ನುಡಿಯುವಿರಿ? ಹೆಣ್ಣಿನಿಂದಲೇ ರಾಜರದೂ ಹುಟ್ಟು. ಹೆಣ್ಣಿನಿಂದ ಹೆಣ್ಣಿನ ಹುಟ್ಟು. ಹೆಣ್ಣಿಲ್ಲದೆ ಯಾರೂ ಇಲ್ಲ. ಹೆಣ್ಣನ್ನು ಹೊರತು ಪಡಿಸಿದರೆ ಕೇವಲ ಅವನೊಬ್ಬನೇ ಸತ್ಯ ಎಂದು ನಾನಕನು ಹೇಳು ತ್ತಾನೆ. ಯಾರ ಬಾಯಿಂದ ಸದಾಕಾಲ ಪ್ರಭುವಿನ ಗುಣಗಾನವಾಗುತ್ತಿರುವುದೊ ಅವನು ಭಾಗ್ಯಶಾಲಿ, ಅವನ ಮುಖವು ಪ್ರಭುವಿನ ದರಬಾರದಲ್ಲಿ ಯಾವಾಗಲೂ ಉಜ್ಜ್ವಲವಾಗಿರುವುದು ಎಂದು ನಾನಕನು ಹೇಳುತ್ತಾನೆ.

(೪೭೩)

## ತ್ಯಾಗ

### (ಯೋಗಿಗಳೊಡನೆ ಚರ್ಚೆ)

(೧೬೩)

ಚರ್ಪಟ ಅವಧೂತರು ನುಡಿದರು—ನಮಗೆ ವಿಚಾರವನ್ನು ಕುರಿತು ಹೇಳಿರಿ. ಪ್ರಪಂಚವು ದುಸ್ತರ ವಾದ ಸಮುದ್ರವು. ಇದನ್ನು ಹೇಗೆ ದಾಟಬೇಕು? ಸ್ವಯಂ ಜ್ಞಾನಿಯೂ ಪ್ರಶ್ನೆಕರ್ತನೂ ಆಗಿರುವವನಿಗೆ ಏನೆಂದು ಉತ್ತರ ಕೊಡಲಿ? ಸತ್ಯ ಹೇಳುವುದಾದರೆ ನೀನು ಪಾರಂಗತನು ನಿನ್ನ ಕೂಡ ಹೇಗೆ ವಿವಾದ ಮಾಡಲಿ? ಹೇಗೆ ನೀರಲ್ಲಿ ಕಮಲವು ನಿರ್ಲಿಪ್ತವಾಗಿರುವದೋ ಹಾಗೆ, ನೀರಲ್ಲಿ ನೀರ್ಗೋಳಿಯು ಒದ್ದೆ ಯಾಗದೆ ಇರುವ ಹಾಗೆ, ಶಬ್ದದಲ್ಲಿ ಮನವಿರಿಸಿ, ನಾಮವನ್ನು ಜಪಿಸುತ್ತಿರುವವನು ಭವಸಾಗರದಿಂದ ನಿರ್ಲಿಪ್ತ ನಾಗಿರುವನು, ಅಂದರೆ ಭವಸಾಗರವನ್ನು ದಾಟುವನು. ಯಾರ ಮನದಲ್ಲಿ ಒಬ್ಬ ಪ್ರಭು ನೆಲಸಿರುವನೊ, ಯಾವನು ಆಸೆಯಿದ್ದರೂ ಆಶಾರಹಿತನೂ ಆಗಿರುವನೊ ಅವನೇ ಏಕಾಂತದಲ್ಲಿರುವನು. ಸ್ವಯಂ ನೋಡುವ ಮತ್ತು ತೋರಿಸುವ ಅಗಮ ಅಗೋಚರ ಪ್ರಭುವಿನ ದಾಸನು ನಾನಕನು.

(೯೩೮)

(೧೬೪)

ಗೋರಖಪುತ್ರ ಲೋಹಾರೀಪಾ ಹೇಳಿದನು: ನಾವು ನಗರಗಳ ಪೇಟೆ ಸಂತೆ ಮತ್ತು ದಾರಿಗಳಿಂದ ದೂರ ವಾಗಿದ್ದು ಉದ್ಯಾನಗಳಲ್ಲಿ ಮರಗಳ ಕೆಳಗೆ ಇರುವೆವು. ಕಂದಮೂಲಗಳನ್ನೇ ತಿಂದು ಬಾಳುವ ಅವಧೂತರ ವಾಣಿಯಲ್ಲಿ ಜ್ಞಾನವಿರುವುದು. ತೀರ್ಥಸ್ಥಾನಗಳಿಂದ ಸುಖಫಲವು ದೊರೆಯುವುದು, ಹೊಲಸು ಹತ್ತು ವುದಿಲ್ಲ. ಇದೇ ಯೋಗದ ಯುಕ್ತಿ, ರೀತಿ. ಸಂತೆ—ಪೇಟೆಯಲ್ಲಿದ್ದರೂ ನಿದ್ರೆ ಬರುವುದಿಲ್ಲ; ಆದರೆ ಮನೆ

ಹಾಟೀ ಬಾಟೀ ನೀಂದ ನ ಆವೈ ಪರ ಘರಿ ಚಿತು ನ ಡುಲಾಈ ॥
ಬಿನು ನಾವೈ ಮನು ಟೇಕ ನ ಟಿಕಈ ನಾನಕ ಭೂಖ ನ ಜಾಈ ॥
ಹಾಟು ಪಟಣು ಘರು ಗುರು ದಿಖಾಇಆ ಸಹಜೆ ಸಚು ವಾಪಾರೊ ॥
ಖಂಡಿತ ನಿದ್ರಾ ಅಲಪ ಅಹರಂ ನಾನಕ ತತು ವೀಚಾರೊ ॥ ೮ ॥

ರಾಮಕಲೀ ಸಿಧ ಗೋಸಟಿ.

(೧೬೫)

ದರಸನು ಭೇಖ ಕರಹು ಜೋಗಿಂದ್ರಾ ಮುಂದ್ರಾ ಝೋಲಿ ಖಿಂಥಾ ॥
ಬಾರಹ ಅಂತರಿ ಏಕು ಸರೇವಹು ಖಟು ದರಸನ ಇಕ ಪಂಥಾ ॥
ಇನ ವಿಧಿ ಮನು ಸಮಝಾಈಐ ಪುರಖಾ ಬಾಹುಡಿ ಚೋಟ ನ ಖಾಈಐ ॥
ನಾನಕು ಬೋಲೈ ಗುರಮುಖಿ ಬೂಝೈ ಜೋಗ ಜುಗತಿ ಇವ ಪಾಈಐ ॥ ೯ ॥
ಅಂತರಿ ಸಬದು ನಿರಂತರಿ ಮುದ್ರಾ ಹಉಮೈ ಮಮತಾ—ದೂರಿ ಕರೀ ॥
ಕಾಮು ಕ್ರೋಧು ಅಹಂಕಾರು ನಿವಾರೈ ಗುರ ಕೈ ಸಬದಿ ಸು ಸಮಝ ಪರೀ ॥
ಖಿಂಥಾ ಝೋಲೀ ಭರಿಪುರಿ ರಹಿಆ ನಾನಕ ತಾರೈ ಏಕು ಹರೀ ॥
ಸಾಚಾ ಸಾಹಿಬು ಸಾಚೀ ನಾಈ ಪರಖೈ ಗುರ ಕೀ ಬಾತ ಖರೀ ॥ ೧೦ ॥
ಉಂಧಉ ಖಪರು ಪಂಚ ಭೂ ಟೋಪೀ ॥ ಕಾಇಆ ಕಡಾಸಣು ಮನು ಜಾಗೋಟೀ ॥
ಸತು ಸಂತೋಖು ಸಂಜಮು ಹೈ ನಾಲಿ ॥ ನಾನಕ ಗುರಮುಖಿ ನಾಮು ಸಮಾಲಿ ॥

ರಾಮಕಲೀ ಸಿಧ ಗೋಸಟಿ.

(೧೬೬)

ಜೋಗು ನ ಖಿಂಥಾ ನ ಡಂಡೈ ಜೋಗು ನ ಭಸಮ ಚಡಾಈಐ ॥
ಜೋಗು ನ ಮುಂದೀ ಮೂಂಡಿ ಮುಡಾಇಐ ಜೋಗು ನ ಸಿಂಙೀ ವಾಈಐ ॥
ಅಂಜನ ಮಾಹಿ ನಿರಂಜನಿ ರಹೀಐ ಜೋಗ ಜುಗತಿ ಇಬ ಪಾಈಐ ॥ ೧ ॥
ಗಲೀ ಜೋಗು ನ ಹೋಈ ॥ ಏಕ ದ್ರಿಸಟಿ ಕರಿ ಸಮಸರಿ ಜಾಣೈ ಜೋಗೀ ಕಹೀಐ ಸೋಈ
॥ ೧ ॥ ರಹಾಉ ॥
ಜೋಗು ನ ಬಾಹರಿ ಮಡೀ ಮಸಾಣೀ ಜೋಗು ನ ತಾಡೀ ಲಾಈಐ ॥
ಜೋಗು ನ ದೇಸಿ ದಿಸಂತರಿ ಭವಿಐ ಜೋಗು ನ ತೀರಥಿ ನಾಈಐ ॥
ಅಂಜನ ಮಾಹಿ ನಿರಂಜನಿ ರಹೀಐ ಜೋಗ ಜುಗತಿ ಇವ ಪಾಈಐ ॥ ೨ ॥
ಸತಿಗುರು ಭೇಟೈ ತಾ ಸಹಸಾ ತೂಟೈ ಧಾವತು ವರಜಿ ರಹಾಈಐ ॥
ನಿಝರು ಝರೈ ಸಹಜ ಧುನಿ ಲಾಗೆ ಘರ ಹೀ ಪರಚಾ ಪಾಈಐ ॥
ಅಂಜನ ಮಾಹಿ ರಂಜನಿ ರಹೀಐ ಜೋಗು ಜುಗತಿ ಇವ ಪಾಈಐ ॥ ೩ ॥
ನಾನಕ ಜೀವತಿಆ ಮರಿ ರಹೀಐ ಐಸಾ ಜೋಗು ಕಮಾಈಐ ॥
ವಾಜೆ ಬಾಝಹು ಸಿಂಙಿ ವಾಜೈ, ತಉ ನಿರಭಉ ಪದು ಪಾಈಐ ॥
ಅಂಜನ ಮಾಹಿ ನಿರಂಜನಿ ರಹೀಐ ಜೋಗ ಜುಗತಿ ತಉ ಪಾಈಐ ॥ ೪ ॥ ೧ ॥ ೮ ॥

ಸೂಹೀ.



 

ಯಲ್ಲಿದ್ದರೂ ಅಂದರೆ ಸ್ತ್ರೀಯ ಬಳಿಯಲ್ಲಿದ್ದರೂ ಚಿತ್ತವು ಚಂಚಲವಾಗುವುದಿಲ್ಲ, ಹೊಯ್ದಾಡುವುದಿಲ್ಲ. ನಾಮದ ಹೊರತು ಮನವು ಸ್ಥಿರವಾರಗಿರದು, ಹಸಿವು ಹಿಂಗದು. ಸಂತೆ—ಪೇಟೆ, ನಗರ, ಮನೆ ಮಡದಿಯನ್ನು ಗುರುವು ತೋರಿಸಿದನು. ಎಲ್ಲಿ ಸತ್ಯದ ವ್ಯಾಪಾರವು ಸಹಜವಾಗಿ ಆಗುವುದೊ ಅಲ್ಲಿ ನಿದ್ರೆ ಕಮ್ಮಿ, ಆಹಾರವೂ ಸ್ವಲ್ಪ ಮತ್ತು ಅಲ್ಲಿ ತತ್ವದ ವಿಚಾರವು ನಡೆಯುವದೆಂದು ನಾನಕನು ಹೇಳುತ್ತಾನೆ.

(೯೩೮–೩೯)

(೧೬೫)

ಯೋಗಿಯು ಹೇಳತೊಡಗಿದನು – ಮುದ್ರೆ, ಜೋಳಿಗೆ ಮತ್ತು ದುಪ್ಪಟಿ ಇವು ಯೋಗಿಯ ದರ್ಶನ -ವೇಷ, ಇದನ್ನು ಧರಿಸಿರಿ. ಹನ್ನೆರಡು ಯೋಗ ಮಂತ್ರಗಳು ಇರುವವು; ಒಂದನ್ನು ಸೇವಿಸಿರಿ, ಆರು ದರ್ಶನಗಳಲ್ಲಿ ಇದೇ ಶ್ರೇಷ್ಠವಾದ ಮಾರ್ಗವು. ಹೇ ಪುರುಷ, ಮನಸ್ಸಿಗೆ ತಿಳಿಹೇಳಲು ಇದೊಂದೇ ವಿಧಾನವು. ಇದರಿಂದ ಪುನಃ ಯಮನ ಪ್ರಹಾರವಾಗುವುದಿಲ್ಲ. ನಾನಕನು ಹೇಳತೊಡಗಿದನು: ಗುರುಮುಖಿನು ಯೋಗದ ಯುಕ್ತಿಯು ಹೀಗೆ ತಿಳಿಯುವುದೆಂದು ಹೇಳುವನು: ಅಂತರಂಗದಲ್ಲಿರುವ ಶಬ್ದವೇ ನಿರಂತರ ಮುದ್ರೆಯು, ಅದು ಅಹಂಕಾರ ಮಮತೆಯನ್ನು ದೂರ ಮಾಡುವುದು. ಗುರುವಿನ ಶಬ್ದದ ಜ್ಞಾನವಾದಾಗ ಕಾಮ, ಕ್ರೋಧ, ಅಹಂಕಾರಗಳು ತೊಲಗಿ ಹೋಗುವುವು. ಪ್ರಭುವು ಪರಿಪೂರ್ಣನು, ಅವನೇ ಜೋಳಿಗೆ, ಅವನೇ ದುಪ್ಪಟಿ. ಹರಿಯ ಒಂದು ನಾಮವೇ ಭವಸಾಗರವನ್ನು ದಾಟಿಸುವುದು. ಹೇ ಪುರುಷ, ಸತ್ಯವೇ ಸ್ವಾಮಿ, ಸತ್ಯವೇ ನಾಮ, ಇದು ಗುರುವಿನ ಖರೇ ಮಾತು. ಮನಸ್ಸನ್ನು ಪ್ರಪಂಚದಿಂದ ದೂರ ಸರಿಸುವುದೇ ಕಪ್ಪರ, ಪಂಚಭೂತಗಳೇ ಟೊಪ್ಪಿಗೆ, ಕಾಯವೇ ಮೃಗಚರ್ಮಾಸನವು, ಮನವೇ ಜಾಗೋಟಿ (ಟೊಂಕಕ್ಕೆ ಸುತ್ತಿದ ದಾರ). ದಯೆ, ಸಂತೋಷ, ಸಂಯಮಗಳೂ ಜೊತೆಯಲ್ಲಿರಲಿ, ಗುರುವಿನ ಮುಖಾಂತರ ನಾಮವನ್ನು ಹೃದಯದಲ್ಲಿ ಸ್ಥಾಪಿಸಿಕೊಳ್ಳಿರಿ ಎಂದು ನಾನಕನು ಹೇಳುತ್ತಾನೆ. (೯೩೯)

(೧೬೬)

ಯೋಗವು ದುಪ್ಪಟಿಯಲ್ಲಿಲ್ಲ, ದಂಡದಲ್ಲಿಲ್ಲ, ಯೋಗವು ಭಸ್ಮಲೇಪನದಲ್ಲಿಲ್ಲ; ಮುದ್ರೆಯಿಂದ ಯೋಗಿಯಾಗುವುದಿಲ್ಲ. ತಲೆ ಬೋಳಿಸಿಕೊಳ್ಳುವಲ್ಲಿ ಯೋಗವಿಲ್ಲ; ಕೊಂಬು ಊದುವಲ್ಲಿ ಯೋಗವಿಲ್ಲ. ಅಂಜನದಲ್ಲಿದ್ದೂ ನಿರಂಜನ–ಸಮ ಇರುವರು. ಯೋಗದ ಯುಕ್ತಿಯನ್ನು ಹೀಗೆ ಪಡೆಯುವರು. ಮಾತಿನಿಂದ ಯೋಗವಾಗುವುದಿಲ್ಲ; ಸಮದರ್ಶಿಗಳೂ ಸಮವರ್ತಿಗಳೂ ಆಗಿರುವವರಿಗೇ ಯೋಗಿಗಳೆನ್ನುವರು. ಹೊರಗೆ ಮಠ – ಮಸಣಗಳಲ್ಲಿ ಯೋಗಜ್ಞಾನವಾಗುವುದಿಲ್ಲ, ಧ್ಯಾನ ಹಚ್ಚುವುದರಿಂದ ಯೋಗವಾಗುವುದಿಲ್ಲ. ದೇಶ ದೇಶಾಂತರಗಳಲ್ಲಿ ಭ್ರಮಣ ಮಾಡುವುದರಿಂದ ಯೋಗಿಯಾಗುವುದಿಲ್ಲ, ತೀರ್ಥಗಳಲ್ಲಿ ಸ್ನಾನಮಾಡುವುದರಿಂದಲೂ ಯೋಗಜ್ಞಾನವಾಗುವುದಿಲ್ಲ. ಅಂಜನದಲ್ಲಿ ನಿರಂಜನ – ಸಮರಾಗಿ ಇದ್ದು. ಯೋಗ ಯುಕ್ತಿಯನ್ನು ಹೀಗೆ ಪಡೆಯುವರು. ಸದ್ಗುರುವು ಸಿಕ್ಕರೆ ಸಂಶಯಗಳು ದೂರಾಗುವವು, ಅಲೆಯುತ್ತಿರುವ ಮನವು ಸ್ಥಿರವಾಗುವುದು. ನಿರ್ಝರದ ಝುರಝುರದ ಸಹಜ ಶಬ್ದ ಧ್ವನಿಯಲ್ಲಿ ಮನಸ್ಸು ತೊಡಗುವುದು. ಮನೆಯಲ್ಲಿಯೆ – ಅಂತರಂಗದಲ್ಲಿಯೆ ಯೋಗದ ಪರಿಚಯವಾಗುವುದು. ಅಂಜನದಲ್ಲಿ ನಿರಂಜನ – ಸಮ ಇರುವರು. ಯೋಗದ ಯುಕ್ತಿಯನ್ನು ಹೀಗೆ ಪಡೆಯುವರು. ಜೀವನ್ಮೃತವಾಗುವಂಥ ಯೋಗವನ್ನು ಗಳಿಸಬೇಕೆಂದು ನಾನಕನು ಹೇಳುತ್ತಾನೆ. ಆಗ ವಾದ್ಯವಿಲ್ಲದೆ ಕೊಂಬು ಬಾರಿಸುವುದು. ಆಗ ನಿರ್ಭಯ ಪದವನ್ನು ಪಡೆಯುವರು. ಅಂಜನದಲ್ಲಿ ನಿರಂಜನ – ಸಮ ಇರುವರು.

(೭೩೦)



 

ಭಾಗ ಆರು

# ತಾತ್ಕಾಲೀನ ಸಾಮಾಜಿಕ ಏವಂ ರಾಜನೀತಕ ಪರಿಸ್ಥಿತಯಾ

## ಆ ಕಾಲದ ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿಗಳು

**ಕಾದೀಕೂಡ ಬೋಲ ಮಲು ಖಾಈ ॥ ಬ್ರಾಹಮಣ ನಾವೈ ಜೀಆ ಘಾಈ ॥**
**ಜೋಗೀ ಜುಗತಿ ನ ಜಾಣೈ ಅಂಧು ॥ ਤੀਨੇ ਓਜਾਡੇ ಕಾ ಬಂಧು ॥ ੨ ॥ ੪ ॥ ੧ ॥**[1]

**ಧನಾಸಾರೀ.**

1. ಕಾಜಿಯು ಸುಳ್ಳಾಡುವನು, ಲಂಚ ತಿನ್ನುವನು; ಬಾಹ್ಮಣನು ಸ್ನಾನಮಾಡುವನು ಜೀವಹತ್ಯೆಯ ಅನಂತರ. ಯೋಗಿಯು ಕುರುಡನು, ಯೋಗದ ಯುಕ್ತಿಯನ್ನು ಅರಿಯನು; ಮೂವರೂ ಪತನದ ಬಂಧುಗಳು,

 

(೧೬೭)

ಸತೀ ಪಾಪು ಕರಿ ಸತ ಕಮಾಹಿ ॥ ಗುರ ದಿಖಿಆ ದೇವಣ ಜಾಹಿ
ಇಸತರೀ ಪುರಖೈ ಖಟಿಐ ಭಾಉ ॥ ಭಾವೈ ಆವಉ ಭಾವೈ ಜಾಉ ॥
ಸಾಸತು ವೇದು ನ ಮಾನೈ ಕೋಈ ॥ ಆಪೋ ಆಪೈ ಪೂಜಾ ಹೋಇ ॥
ಕಾಜೀ ಹೋಈ ಕೈ ಬಹೈ ನಿಆಇ ॥ ಫೇರೆ ತಸಬೀ ಕರೇ ಖುದಾಇ ॥
ವಢೀ ಲೈಕೈ ಹಕು ಗವಾಏ ॥ ಜೇಕೊ ಪುಛೈ ತಾ ಪಡಿ ಸುಣಾಏ ॥
ತುರಕ ಮಂತ್ರು ಕನಿ ರಿದೈ ಸಮಾಹಿ ॥ ಲೋಕ ಮುಹಾವಹಿ ಚಾಡೀ ಖಾಹಿ ॥
ಚಉಕಾ ದೇಕೈ ಸುಚಾ ಹೋಇ ॥ ಐಸಾ ಹಿಂದೂ ವೇಖಹು ಕೋಇ ॥
ಜೋಗೀ ಗಿರಹೀ ಜಟಾ ವಿಭೂತ ॥ ಆಗೈ ಪಾಛೈ ರೋವಹಿ ಪೂತ ॥
ಜೋಗು ನ ಪಾಇಆ ಜುಗತಿ ಗವಾಈ ॥ ಕಿತು ಕಾರಣಿ ಸಿರಿ ಛಾಈ ಪಾಈ ॥
ನಾನಕ ಕಲಿ ಕಾ ಏಹು ಪರವಾಣು ॥ ಆಪೆ ಆಖಣು ಆಪೆ ಜಾಣು ॥ ೧ ॥

**ವಾರ ರಾಮಕಲೀ ಸಲೋಕ ೧ ಪಉಡೀ ೧೧.**

(೧೬೮)

ಆದಿ ಪುರಖ ಕಉ ಅಲಹು ಕಹೀಐ ಸೇಖಾ ಆಈ ವಾರೀ ॥
ದೇವಲ ದೇವತಿಆ ಕರು ಲಾಗಾ ಐಸೀ ಕೀರತಿ ಚಾಲಿ ॥ ೫ ॥
ಕೂಜಾ ಬಾಗ ನಿವಾಜ ಮುಸಲಾ ನೀಲ ರೂಪ ಬನವಾರಿ ॥
ಘರಿ ಘರಿ ಮೀಆ ಸಭನಾ ಜೀಆ ಬೋಲೀ ಅವರ ತುಮಾರಿ ॥ ೬ ॥

**ಬಸಂತ ಹಿಂಡೋಲ ಅಸಟಪದೀಆ.**

(೧೬೯)

ಕಲಿ ಹೋಈ ಕುತೆ ಮುಹೀ ಖಾಜು ಹೋವಾ ಮುರದಾರು ॥
ಕುಡು ಬೋಲಿ ಬೋಲಿ ಭಉಕಣಾ ಚೂಕಾ ಧ[illegible]ು ಬೀಚಾರು ॥
ಜಿನ ಜೀವಂದಿಆ ಪತಿ ನಹೀ ಮುಇಆ ಮಂದೀ ಸೋಇ ॥
ಲಿಖಿಆ ಹೋವೈ ನಾನಕಾ ಕರತಾ ಕರೆ ಸು ಹೋಇ ॥ ೧ ॥
ರಂನಾ ಹೋಈಆ ಬೋಧೀಆ ಪುರಸ ಹೋಏ ಸಈಆದ ॥
ಸೀಲು ಸಂಜಮು ಸುಚ ಭಂನೀ ಖಾಣಾ ಖಾಜು ಅಹಾಜು॥
ಸರಮು ಗಇಆ ಘರಿ ಆಪಣೈ ಪತಿ ಉಠಿ ಚಲಿ ನಾಲಿ ॥
ನಾನಕ ಸಚಾ ಏಕು ಹೈ ಅಉರು ನ ಸಚಾ ಭಾಲಿ ॥ ೨ ॥

**ವಾರ ಸಾರಂಗ ಪಉಡೀ ೧೪ ಸಲೋಕ.**

(೧೭೦)

ಹರಿಣಾ ಬಾಜಾ ತೈ ಸಿಕದಾರಾ ಏನ್ಹಾ ಪಢಿಆ ನಾಉ ॥
ಫಾಂಧೀ ಲಗೀ ಜಾತಿ ಫಹಾಇನಿ ಅಗೈ ನಾಹೀ ಥಾಉ ॥

(೧೬೭)

ದಾನಿಗಳು ಪಾಪ ಮಾಡುವರು; ದಾನ ಮಾಡುವರು. ದೀಕ್ಷೆಯನ್ನು ಕೊಡಲು ಗುರುಗಳು ಶಿಷ್ಯರ ಮನೆಗೆ ಹೋಗುವರು; ಹೆಂಡತಿ ಗಂಡನ ಧನವನ್ನು ಪ್ರೀತಿಸುವಳು, ಗಂಡ ಮನೆಗೆ ಬರಲಿ, ಬಿಡಲಿ, ಆಕೆಗೆ ಪರವಾ ಇಲ್ಲ. ಶಾಸ್ತ್ರ ವೇದಗಳನ್ನು ಯಾರೂ ಮನ್ನಿಸುವುದಿಲ್ಲ; ಎಲ್ಲರೂ ಆತ್ಮ ಪೂಜೆಯಲ್ಲಿ ರತರು. ಕಾಜಿಗಳು ನ್ಯಾಯಮಾಡುವರು, ಜಪಮಾಲೆ ತಿರುಗಿಸುವರು, ಖುದಾನ ಹೆಸರು ತೆಗೆದುಕೊಳ್ಳುವರು. ಲಂಚ ತೆಗೆದು ಕೊಂಡು ಸತ್ಯವನ್ನು ಕೊಲ್ಲುವರು, ಪ್ರಶ್ನೆ ಕೇಳಿದರೆ ಪುಸ್ತಕ ಓದಿ ನಮಗೆ ಉತ್ತರಿಸುವರು. ತುರಕ ಮಂತ್ರ ಕಿವಿಗಳಲ್ಲಿ ಮತ್ತು ಹೃದಯದಲ್ಲಿ ಸೇರಿಸಿ ಎಂದು ಜನರನ್ನು ಮೋಸಗೊಳಿಸುವರು; ಇದೇ ಅವರ ಗಳಿಕೆ. ಆಮೇಲೆ ಗೆರೆ ಎಳೆದು ಮಡಿ ಜಾಗಮಾಡುವಂಥ ಹಿಂದೂಗಳ ಕಡೆಗೆ ನೋಡಿರಿ. ಯೋಗಿಗಳು ಜಟಾಧಾರಿಗಳಾಗಿ ವಿಭೂತಿ ಹಚ್ಚಿಕೊಂಡು ಗೃಹಸ್ಥರಾಗಿರುವರು; ಅವರ ಎದುರಿಗೆ ಹಿಂದೆ ಮಕ್ಕಳು ಅಳು ತ್ತಿರುವರು. ಯೋಗ ಪಡೆಯಲಿಲ್ಲ, ಯುಕ್ತಿಯನ್ನು ಕಳೆದುಕೊಂಡರು. ತಲೆಯ ಮೇಲೆ—ಹಣೆಯ ಮೇಲೆ ಬೂದಿ ಏಕೆ ಹಾಕಿಕೊಂಡಿದ್ದೀರಿ? ತಾವು ಏನು ಹೇಳುವರೋ ಅದು ಅವರಿಗೇ ಗೊತ್ತು. ಇದು ಕಲಿಯುಗದ ಲಕ್ಷಣ ಎಂದು ನಾನಕನು ಹೇಳುತ್ತಾನೆ.

(೯೫೧)

(೧೬೮)

ಈಗ ಶೇಖರ ಸರತಿ ಬಂದಿರುವುದು; ಆದಿ ಪುರುಷನಿಗೆ (ಪರಮಾತ್ಮನಿಗೆ) ಅಲ್ಲಾಹ ಎನ್ನುವರು. ದೇವಾಲಯಗಳ ಮೇಲೂ ಕರ ಹೇರಿದರು, ಇದೆಂಥಹ ರೀತಿ, ದಸ್ತಾವಾರ (ಪಗಡಿಯೊಡನೆ ಕಟ್ಟುವ ಬಟ್ಟೆ?) ನಮಾಜು, ಮತ್ತು ಮುಸಲ್ಲಾ (ನಮಾಜಿನ ಜಮಖಾನೆ) ಇವೇ ಮುಖ್ಯ ಈಗ. ನೀಲ ರೂಪದವರನ್ನು ಪರಮಾತ್ಮನು ಎಂದು ಈಗ ಮನ್ನಣೆ. ಮನೆ ಮನೆಯಲ್ಲಿ ಈಗ ಒಬ್ಬರಿಗೊಬ್ಬರು 'ಮಿಯಾ' ಎಂದು ಸಂಬೋಧಿಸುವರು, ಮಾತೂ ಬದಲಾಗಿ ಹೋಯಿತು.

(೧೧೯೧)

(೧೬೯)

ಕಲಿಯುಗವು ನಾಯಿಯ ಮುಖದ್ದಾಯಿತು; ಹೆಣ ತಿನ್ನುವದು ಸುರುವಾಯಿತು. ಎಲ್ಲರೂ ಸುಳ್ಳು ಹೇಳುವರು, ಬೊಗಳುವರು; ಧರ್ಮವಿಚಾರವು ಇಲ್ಲದಾಯಿತು. ಜೀವಿಸಿರುವಾಗ ಯಾರಿಗೂ ಮಾನವಿಲ್ಲ; ಸತ್ತ ಅನಂತರ ತಮ್ಮ ಹಿಂದೆ ಕೆಟ್ಟ ಹೆಸರು ಬಿಟ್ಟು ಹೋಗುವರು. ಭಾಗ್ಯದಲ್ಲಿ ಬರೆದಂತೆ ಆಗುವುದು, ಕರ್ತಾನನು ಮಾಡಿದಂತೆ ಆಗುವದು ಎಂದು ನಾನಕನು ಹೇಳುತ್ತಾನೆ. ನಾರಿಯು ಬುದ್ಧಿಹೀನೆ. ಪುರುಷನು ಆಕೆಯ ಬೇಟೆಗಾರನು. ಶೀಲ, ಸ್ವಚ್ಛತೆ, ಸಂಯಮ ನಷ್ಟವಾದವು. ಈಗ ಅಖಾದ್ಯವು ಖಾದ್ಯವಾಯಿತು. ನಾಚಿಕೆಯು ತನ್ನ ಮನೆಯಲ್ಲಿ ಅಡಗಿ ಕುಳಿತಿತು; ಅದರೊಡನೆಯೆ ಆತ್ಮಸನ್ಮಾನವೂ ಹೋಯಿತು. ಅವ ನೊಬ್ಬನೇ ಸತ್ಯನು, ಇನ್ನೊಬ್ಬ ಸತ್ಯವನ್ನು ಹುಡುಕಬೇಡಿರಿ ಎಂದು ನಾನಕನು ಹೇಳುತ್ತಾನೆ.

(೧೨೪೨–೪೩)

(೧೭೦)

ಹರಿಣ, ಗಿಡಗ, ಸರದಾರ (ಅಧಿಕಾರಿ) – ಇವರು ಶಿಕ್ಷಿತರೆಂದು ಗಣಿಸಲಾಗುವುದು. ಆದರೆ ಎಲ್ಲಿಯಾದರೂ ಬಲೆ ಹಾಕಿದ್ದರೆ ಅಲ್ಲಿಗೆ ತಮ್ಮ ಜಾತಿಯವರನ್ನು ಕರೆದೊಯ್ದು ಜಾಲದಲ್ಲಿ ಸಿಗಿಸಿ ಬಿಡುವರು, ಇವರಿಗೆ



 

ಸೋ ಪಡಿಆ ಸೋ ಪಂಡಿತು ಬೀನಾ ಜಿನೀ ಕಮಾಣಾ ನಾಉ ॥
ಪಹಿಲೋ ದೇ ಜಡ ಅಂದರಿ ಜಂಮೈ ತಾ ಉಪರಿ ಹೋವೈ ಛಾಉ ॥
ರಾಜೆ ನೀಹ ಮುಕದಮ ಕುತೆ ॥ ಜಾಇ ಜಗಾಇನ ಬೈಠೆ ಸುತೆ ॥
ಚಾಕರ ನಹದಾ ಪಾಇನ್ಹಿ ಘಾಉ ॥ ರತು ಪಿತು ಕುತಿಹೋ ಚಟಿ ಜಾಹು ॥
ಜಿಥೈ ಜೀಆ ಹೋಸೀ ಸಾರ ॥ ನಕೀಂ ವಢಂ ಲಾಇತವಾರ ॥ ೨ ॥

ವಾರ ಮಲಾರ ಪಉಡೀ ೨೨ ಸಲೋಕ.

(೧೭೧)

ಮಾಣಸ ಖಾಣೆ ಕರಹಿ ನಿವಾಜ ॥ ಛುರೀ ವಗಾಇನಿ ತಿನ ಗಲಿ ತಾಗ ॥
ನಿನ ಘರಿ ಬ್ರಹಮಣ ಪೂರಹಿ ನಾದ ॥ ಉನಾ ಭಿ ಆವಹಿ ಓಈ ಸಾದ ॥
ಕೂಡಿ ರಾಸಿ ಕೂಡಾ ವಾಪಾರು ॥ ಕೋಲಿ ಕರಹಿ ಆಹಾರು ॥
ಸರಮ ಧರಮ ಕಾ ಡೇರಾ ದೂರಿ ॥ ನಾನಕ ಕೂಡು ರಹಿಆ ಭರಪೂರಿ ॥
ಮಥೈ ಟಿಕಾ ತೇಡಿ ಧೋತೀ ಕಖಾಈ ॥ ಹಥಿ ಛುರೀ ಜಗತ್ ಕಾಸಾಈ ॥
ನೀಲ ಬಸತ್ರ ಪಹಿರಿ ಹೋವಹಿ ಪರವಾಣು ॥ ಮಲೇಛ ಧಾನು ಲೇ ಪೂಜಹಿ ಪುರಾಣು ॥
ಅಭಾಖಿಆ ಕಾ ಕುಠಾ ಬಕರಾ ಖಾಣಾ ॥ ಚಉಕೇ ಉಪರಿ ಕಿಸೈ ನ ಜಾಣಾ ॥
ದೇಕೈ ಚಉಕಾ ಕಢೀ ಕಾರ ॥ ಉಪರಿ ಆಇ ಬೈಠೆ ಕೂಡಿಆರ ॥
ಮತು ಭಿಟೈ ವೆ ಮತು ಭಿಟೈ ॥ ಇಹು ಅಂಜು ಅಸಾಡಾ ಭಿಟೈ ॥
ತನಿ ಫಿಟೈ ಫೇಡ ಕರೇನಿ ॥ ಮನಿ ಝೂಠೈ ಚುಲೀ ಭರೇನಿ ॥
ಕಹು ನಾನಕ ಸಚು ಧಿಆಈಐ ॥ ಸುಚಿ ಹೋವೈ ತಾ ಸಚು ಪಾಈಐ ॥ ೨ ॥

ವಾರ ಆಸಾ ಪಉಡೀ ೧೬ ಸಲೋಕ.

(೧೭೨)

ಕಲಿ ಕಾತೀ ರಾಜೆ ಕಾಸಾಈ ಧರಮು ಪಂಖ ಕರಿ ಉಡರಿಆ ॥
ಕೂಡು ಅಮಾವಸ ಸಚು ಚಂದ್ರಮಾ ದೀಸೈ ನಾಹೀ ರಹ ಚಡಿಆ ॥
ಹಉ ಭಾಲಿ ವಿಕುಂನಿ ಹೋಈ ॥ ಆಧೇರೈ ರಾಹು ನ ಕೋಈ ॥
ವಿಚಿ ಹಉಮೈ ಕರಿ ದುಖು ರೋಈ ॥ ಕಹು ನಾನಕ ಕಿನಿ ವಿಧಿ ಗತಿ ಹೋಈ ॥ ೧ ॥

ವಾರ ಮಾಝು ಪಉಡೀ ೧೬ ಸಲೋಕ.

(೧೭೩)

ಲಬು ಪಾಪು ದುಇ ರಾಜಾ ಮಹತಾ ಕುಡು ಹೋಆ ಸಿಕದಾರು ॥
ಕಾಮು ನೇಬು ಸದಿ ಪುಛೀಐ ಬಹಿ ಬಹಿ ಕರೆ ವೀಚಾರು ॥
ಅಂಧೀ ರಯತಿ ಗಿಆನ ವಿಹೂಣಿ ಭಾಹಿ ಭರೆ ಮುರದಾರು ॥
ಗಿಆನಿ ನಚಹಿ ವಾಜೆ ವಾವಹಿ ರೂಪ ಕರಹಿ ಸೀಗಾರು ॥
ಊಚೆ ಕೂಕಹಿ ವಾದಾ ಗಾವಹಿ ಜೋಧಾ ಕಾ ವೀಚಾರು ॥
ಮೂರಖ ಪಂಡಿತ ಹಿಕಮತಿ ಹುಜತಿ ಸಂಜೈ ಕರಹಿ ಪಿಆರು ॥



 

ಪರಲೋಕದಲ್ಲಿ ಸ್ಥಾನವೆಲ್ಲಿ ಸಿಗುವುದು ? ದೇವರ ನಾಮ ಗಳಿಸಿದವರೇ ಶಿಕ್ಷಿತರು, ಪಂಡಿತರು, ಬುದ್ಧಿವಂತರು. ಭೂಮಿಯೊಳಗೆ ಚೆನ್ನಾಗಿ ಬೇರು ಬಿಟ್ಟಬಳಿಕವೇ ಮರವು ಅನಂತರ ಪಲ್ಲವಿಸಿ ನೆರಳು ಕೊಡುವುದು. ರಾಜರು ಸಿಂಹ, ಚೌಧರಿ, ನಾಯಿಗಳು ಶಾಂತಿಯಿಂದ ಕುಳಿತ ಹಾಗೂ ಮಲಗಿದ ಜನರನ್ನು ಸದಾ ಎಬ್ಬಿಸುತ್ತಿರುವವರು ಮತ್ತು ಎಚ್ಚರಿಸುತ್ತಿರುವವರು. ಚಾಕರರು ಉಗುರಿದ್ದವರು ಗಾಯ ಮಾಡುವರು; ಆದರೆ ರಕ್ತ ನೆಕ್ಕುವವು ನಾಯಿಗಳು (ಕರ್ಮಚಾರಿಗಳು). ಎಲ್ಲಿ ಜೀವದ ಸುಖ ದುಃಖಗಳ ಬಗ್ಗೆ ವಿಚಾರಿಸಿಕೊಳ್ಳಲಾಗುತ್ತಿರುವುದೊ ಅಲ್ಲಿ ನಿರ್ಲಜ್ಜನ ಮೇಲೆ ಯಾರು ವಿಶ್ವಾಸವಿಡುವರು ? (೧೨೮೮)

(೧೭೧)

ಮಾನವ ಭಕ್ಷಕರು ನಮಾಜು ಮಾಡುವರು. ಜನಿವಾರ ಹಾಕಿಕೊಳ್ಳುವರು, ಚೂರಿ ಹಾಕುವರು; ಇಂಥ ಜನರ ಮನೆಯಲ್ಲಿ ಬ್ರಾಹ್ಮಣರು ಊಟವಾದ ಅನಂತರ ಆಶೀರ್ವಾದ ಮಂತ್ರ ಹೇಳುವರು. ಇಂದು ಅವರಿಗೂ ಪ್ರಿಯವಾದ ಕೆಲಸ, ತಮ್ಮ ಯಜಮಾನನ ಈ ವ್ಯವಹಾರವೂ ಅವರಿಗೆ ಇಷ್ಟವಾದದ್ದು. ಅಸತ್ಯ ಧನರಾಶಿಯಿಂದ ಅಸತ್ಯ ವ್ಯಾಪಾರ. ಸುಳ್ಳು ಹೇಳಿ ಹೊಟ್ಟೆ ತುಂಬಿಕೊಳ್ಳುವರು. ನಾಚಿಕೆ ಧರ್ಮಗಳು ತಮ್ಮ ಡೇರೆಯನ್ನು ಕಿತ್ತುಹಾಕಿರುವವು; ಸರ್ವತ್ರ ಅಸತ್ಯವು ತುಂಬಿರುವದೆಂದು ನಾನಕನು ಹೇಳುತ್ತಾನೆ. ಹಣೆಯ ಮೇಲೆ ಗಂಧಾಕ್ಷತೆ, ಕಾಷಾಯದ ದೋತರ, ಆದರೆ ಕೈಯಲ್ಲಿ ಚೂರಿ; ಇವರು ಜಗತ್ತಿನ ಕಟುಕರು. ನೀಲಿ ವಸ್ತ್ರಧರಿಸಿ ಮಾನ್ಯರಾಗುವರು; ಮ್ಲೇಚ್ಛರಿಂದ ಧ್ಯಾನ ತೆಗೆದುಕೊಂಡು ಪುರಾಣ ಗ್ರಂಥಗಳನ್ನು ಪೂಜಿಸುವರು. ಪರಭಾಷೆಯ ಮಂತ್ರ ಹೇಳಿ ಕುರಿಗೆ ಚೂರಿ ಹಾಕುವರು, ಅದರ ಮಾಂಸ ತಿಂದು ಅನ್ನುವರು—ಪವಿತ್ರ ಜಾಗದಲ್ಲಿ ಯಾರೂ ಬರಕೂಡದು ಎಂದು. ಗೆರೆ ಹಾಕಿ ಪವಿತ್ರ ಸ್ಥಳ ಮಾಡಿಕೊಂಡರು. ಆ ಪವಿತ್ರ ಸ್ಥಳದಲ್ಲಿ ಕುಳಿತವರು "ನೋಡಿರಿ, ಈ ಜಾಗದಲ್ಲಿ ಯಾರೂ ಬರಬಾರದು, ನಮ್ಮ ಆಹಾರವು ಅಪವಿತ್ರವಾಗಬಾರದು ನೋಡಿರಿ". ವಿಕೃತ ದೇಹಿಗಳು ದುಷ್ಕರ್ಮವನ್ನು ಮಾಡುವರು. ಮನದಲ್ಲಿ ಎಂಜಲ ತುಂಬಿಕೊಂಡು ಬಾಯಿ ಮುಕ್ಕಳಿಸುವರು. ಸತ್ಯವನ್ನು ಧ್ಯಾನಿಸಿರಿ. ಸತ್ಯದ ಸಾಕ್ಷಾತ್ಕಾರವಾದರೆ ಶುಚಿಯಾಗುವಿರಿ ಎಂದು ನಾನಕನು ಹೇಳುತ್ತಾನೆ.

(೪೭೧-೭೨)

(೧೭೨)

ಕಲಿಯುಗವು ಒಂದು ಚೂರಿ, ಅರಸರು ಕಟುಕರು. ರೆಕ್ಕೆ ಹಚ್ಚಿಕೊಂಡು ಧರ್ಮವು ಹಾರಿಹೋಯಿತು. ಸುಳ್ಳೆಂಬ ಅಮಾವಾಸ್ಯೆ ಪಸರಿಸುವುದು, ಸತ್ಯ ಚಂದ್ರನು ಕಾಣುತಿರುವುದಿಲ್ಲ; ಎಲ್ಲಿದೆ ಅವನ ಉದಯ? ಹುಡುಕಿ, ಹುಡುಕಿ ವ್ಯಥಿತನಾದೆನು. ಕತ್ತಲಲ್ಲಿ ಯಾವ ಮಾರ್ಗವೂ ಕಾಣುವುದಿಲ್ಲ. ಅಹಂಕಾರವಶರಾಗಿ ಎಲ್ಲರೂ ದುಃಖಿಗಳಾಗಿ ಅಳುತ್ತಿರುವರು. ಮುಕ್ತಿಯ ರೀತಿ ಯಾವುದು ? ಎಂದು ನಾನಕನು ಕೇಳುತ್ತಿದ್ದಾನೆ. (೧೪೫)

(೧೭೩)

ಲೋಭಪಾಪಗಳೆರಡೂ ಅರಸಮಂತ್ರಿಗಳ ಹಾಗೆ. ಸುಳ್ಳು ಅವರ ಸ್ಥಳಿಕ ಅಧಿಕಾರಿ, ಕೆಲಸ ಅವರ ಸಲಹೆಗಾರ. ಸಲಹೆಗೋಸ್ಕರ ಎಲ್ಲರನ್ನೂ ಕರೆಯುತ್ತಾರೆ. ಎಲ್ಲರೂ ಕುಳಿತು ವಿಚಾರ ವಿನಿಮಯ ಮಾಡುವರು. ಜ್ಞಾನ ಹೀನ ಪ್ರಜೆ ಕುರುಡಾಗಿರುವುದು. ಪ್ರಜೆಯು ಲಂಚದ ಉರುವಲವನ್ನು ಹಾಕಿ ದಿನವೂ ತೃಷ್ಣಾಗ್ನಿಯನ್ನು ಪ್ರಜ್ವಲಿಸುತ್ತಿರುವುದು. ಜ್ಞಾನಿಗಳು ಕುಣಿಯುವರು, ವಾದ್ಯ ಬಾರಿಸುವರು ಮತ್ತು ರೂಪ ಸಿಂಗಾರ ಮಾಡಿಕೊಳ್ಳುವರು. ದೊಡ್ಡ ದನಿಯಿಂದ ಯೋಧರ ಕಥೆಗಳನ್ನು ಹಾಡುತ್ತಿರುವರು. ಪಂಡಿತರೂ ಮೂರ್ಖ ವಾದ ವಿವಾದಗಳಲ್ಲಿ ಪಟುಗಳು, ಧೂರ್ತರು, ಧನಸಂಚಯದ ಪ್ರೇಮಿಗಳು ಆಗಿರುವರು.

ಧರಮೀ ಧರಮು ಕರಹಿ ಗಾವಾವಹಿ ಮಂಗಹಿ ಮೋಖ ದುಆರು ॥
ಜತಿ ಸದಾವಹಿ ಜುಗತಿ ನ ಜಾನಹಿ ಛಡಿ ಬಹಹಿ ಘರ ಬಾರು ॥
ಸಭು ಕೋ ಪೂರಾ ಆಪೆ ಹೋವ್ಯೆ ಘಟಿ ನ ಕೋಈ ಆಖ್ಯೆ ॥
ಪತಿ ಪರವಾಣಾ ಪಿಛ್ಯೆ ಪಾಈಐ ತಾ ನಾನಕ ತೋಲಿಆ ಜಾಪ್ಯೆ ॥ ೨ ॥

ವಾರ ಆಸಾ ಮಹಲು ೧ ೧೧ ಸಲೋಕ.

## ಬಾಬರ ಕಾ ಆಕ್ರಮಣ

### (ದೂರದರ್ಶಿತಾ)

(೧೭೪)

ಜ್ಯೆಸಿ ಮ್ಯೆ ಆವ್ಯೆ ಖಸಮ ಕೀ ಬಾಣೀ ತ್ಯೆಸಡಾ ಕರಿ ಗಿಆನು ವೆ ಲಾಲೋ ॥
ಪಾಪ ಕೀ ಜಂಞ ಲ್ಯೆ ಕಾಬಲಹು ಧಾಇಆ ಜೋರೀ ಮಂಗ್ಯೆ ದಾನು ವೇ ಲಾಲೋ ॥
ಸರಮು ಧರಮು ದುಇ ಛಪಿ ಖಲೋಏ ಕೂಡು ಫಿರ್ಯೆ ಪರಧಾನು ವೇ ಲಾಲೋ ॥
ಕಾಜೀಆ ಬಾಮ್ಣಾ ಕೀ ಗಲಿ ಥಕೀ ಅಗದು ಪಡೆ ಸ್ಯೆತಾನು ವೇ ಲಾಲೊ ॥
ಮುಸಲಮಾನೀಆ ಪಡಹಿ ಕತೇಬಾ ಕಸಟ ಮಹಿ ಕರಹಿ ಖುದಾಇ ವೇ ಲಾಲೋ ॥
ಜಾತಿ ಸನಾತೀ ಹೋರಿ ಹಿದವಾಣೀ ಏ ಭೀ ಲೇಖೈ ಲಾಇ ವೇ ಲಾಲೋ ॥ ೧ ॥
ಖೂನ ಕೇ ಸೋಹಿಲೆ ಗಾವೀಅಹಿ ನಾನಕ ರತು ಕಾ ಕುಂಗೂ ಪಾಇ ವೇ ಲಾಲೋ ॥
ಸಾಹಿಬ ಕೇ ಗುಣ ನಾನಕು ಗಾವ್ಯೆ ಮಾಸಪುರಿ ವಿಚಿ ಆಖು ಮಸೋಲಾ ॥
ಜಿನಿ ಉಪಾಈ ರಂಗಿ ರವಾಈ ಬ್ಯೆಠಾ ವೇಖ್ಯೆ ವಖಿ ಇಕೇಲಾ ॥
ಸಚಾ ಸೋ ಸಾಹಿಬು ಸಚು ತಪಾವಸು ಸಚಡಾ ನಿಆಉ ಕರೇಗು ಮಸೋಲಾ ॥
ಕಾಇಆ ಕಪಡು ಟುಕು ಟುಕು ಹೋಸೀ ಹಿಂದುಸ್ತಾನ ಸಮಾಲಸೀ ಬೋಲಾ ॥
ಆವನಿ ಅಠತರ್ಯೆ ಜಾನಿ ಸತಾನವ್ಯೆ ಹೋರು ಭೀ ಉಠಸೀ ಮರದ ಕಾ ಚೇಲಾ ॥
ಸಚ ಕೀ ಬಾಣೀ ನಾನಕು ಆಖ್ಯೆ ಸಚು ಸುಣಾಇಸೀ ಸಚ ಕೀ ಬೇಲಾ ॥ ೨ ॥ ೩ ॥ ೫ ॥

ತಿಲಂಗ.

## ಬಾಬರ ಕಾ ಆಕ್ರಮಣ

### (ಖೇದ)

(೧೭೫)

ಖುರಾಸಾನ ಖಸಮಾನಾ ಕೀಆ ಹಿಂದುಸತಾನು ಡರಾಇಆ ॥
ಆಪ್ಯೆ ದೋಸು ನ ದೇಈ ಕರತಾ ಜಮು ಕರಿ ಮುಗಲು ಚಡಾಇಆ ॥
ಏತೀ ಮಾರ ಪಈ ಕುರಲಾಣೆ ತ್ಯೆ ಕೀ ದರದು ನ ಆಇಆ ॥ ೧ ॥
ಕರತಾ ತೂ ಸಭನಾ ಕಾ ಸೋಈ ॥ ಜೇ ಸಕತಾ ಸಕತೇ ಕಉ ಮಾರೆ ತಾ ಮನಿ ರೋಸು ನ
ಹೋಈ ॥ ೧ ॥ ರಹಾಉ ॥
ಸಕತಾ ಸೀಹು ಮಾರೇ ಪ್ಯೆ ವಗ್ಯೆ ಖಸಮ್ಯೆ ಸಾ ಪುರಸಾಈ ॥
ರತನ ಬಿಗಾಡಿ ಬಿಗೋಏ ಕುತೀರಿ ಮುಇಆ ಸಾರ ನ ಕಾಈ ॥
ಆಪೆ ಜೋಡಿ ಬಿಛೋಡೆ ಆಪೆ ವೇಖು ತೇರೀ ವಡಿಆಈ ॥ ೨ ॥

ಧರ್ಮಪರಾಯಣರು ಧರ್ಮ ಮಾಡುವರು. ಜನರು ತಮ್ಮನ್ನು ಹೊಗಳಬೇಕೆಂದು; ಅವರು ಧರ್ಮಕರ್ಮಗಳಿಗೆ ಪ್ರತಿಯಾಗಿ ಮೋಕ್ಷದ್ವಾರವನ್ನು ಬೇಡುವರು. ಯತಿ ಎನಿಸಿಕೊಳ್ಳುವರು, ಆದರೆ ಯೋಗ ಯುಕ್ತಿಯನ್ನರಿಯರು, ಮನೆ ಪರಿವಾರವನ್ನು ಬಿಟ್ಟುಬಿಡುವರು. ಎಲ್ಲರೂ ತಾವು ಪೂರ್ಣರೆಂದು ತಿಳಿಯುವರು. ತನ್ನಲ್ಲಿ ತ್ರುಟಿ ಇರುವದೆಂದು ಯಾವನೂ ಹೇಳುವುದಿಲ್ಲ. ತಕ್ಕಡಿಯ ಪರಡಿಗಳಲ್ಲಿ ಮರ್ಯಾದೆಯ ತೂಕದ ಕಲ್ಲುಗಳಿರುವವು. ಅದರಲ್ಲಿ ನೀವು ಸರಿಯಾಗಿ ತೂಗಿದರೆ ಮಾತ್ರ ನೀವು ಪರಿಪೂರ್ಣರು ಎಂದು ನಾನಕನು ಹೇಳುತ್ತಾನೆ. (೪೬೮–೬೯)

## ಬಾಬರನ ಆಕ್ರಮಣ

### (ದೂರದರ್ಶಿತನ)

(೧೭೪)

ನನಗೆ ಸ್ವಾಮಿಯ ಎಂಥ ಗುರುವಾಣಿಯು ಸಿಕ್ಕಿರುವುದೊ ಅಂತಹ ಜ್ಞಾನವನ್ನೇ ನಿಮಗೆ ಕೊಡುವೆನು. ಪ್ರಿಯ ಬಂಧುಗಳೇ, ಕಾಬುಲದಿಂದ ಪಾಪದ ನಿಬ್ಬಣ ಬರಲಿರುವುದು, ಬಲವಂತವಾಗಿ ಕನ್ಯಾದಾನವನ್ನು ಬೇಡುವರು. ನಾಚಿಕೆ—ಧರ್ಮ ಎರಡೂ ಅಡಗಿಹೋಗುವುವು. ಸುಳ್ಳು ಎಲ್ಲೆಡೆಯಲ್ಲಿ ಹಬ್ಬಿ ಮುಖ್ಯಸ್ಥವಾಗುವುದು. ಕಾಜಿಗಳ ಮತ್ತು ಬ್ರಾಹ್ಮಣರ ಮಾತು ನಿಂತು ಹೋಗುವದು., ಇನ್ನು ಶೈತಾನನು ಲಗ್ನ ಮಾಡಿಸುವನು. ಮುಸಲ್ಮಾನ ಸ್ತ್ರೀಯರು ಕುರಾಣ ಓದುವರು ಮತ್ತು ಕಷ್ಟದಿಂದ ಅನ್ನುವರು 'ಯಾ ಖುದಾ, ಯಾ ಅಲ್ಲಾಹ' ಉಚ್ಚ ಮತ್ತು ನೀಚ ವರ್ಣಗಳ ಹಿಂದೂ ಮಹಿಳೆಯರ ಗತಿ ಹೀಗೆ ಆಗುವುದು. ಇನ್ನು ಕೊಲೆಯ ಗೀತಗಳನ್ನು ಹಾಡುವರು. ರಕ್ತದ ಕೇಸರಿಯನ್ನು ಸಿಂಪಡಿಸುವರು ಎಂದು ನಾನಕನು ಹೇಳುತ್ತಾನೆ. ಇದೇ ಮಾಂಸಪುರಿಯಲ್ಲಿ ನಾನಕನು ಸ್ವಾಮಿಯ ಗುಣಗಾನಮಾಡುವವನು. ಬಣ್ಣಬಣ್ಣದ ಈ ಸೃಷ್ಟಿಯನ್ನು ನಿರ್ಮಿಸಿದವನು ಒಬ್ಬನೇ ಕುಳಿತು ಸ್ವತಃ ಇದನ್ನು ನೋಡುವನು. ಅವನೇ ನಿಜವಾದ ಸ್ವಾಮಿಯು, ಅವನ ನ್ಯಾಯವೂ ಸತ್ಯದ್ದು. ಈ ಸಮಸ್ಯೆಯ ನಿದಾನವೂ ಸತ್ಯವೇ. ಕಾಯದ ಬಟ್ಟೆ ಜೀರ್ಣ—ಶೀರ್ಣವಾಗುವುದು. ನನ್ನ ವಚನಗಳನ್ನು ಹಿಂದುಸ್ಥಾನವು ಸದಾ ಸ್ಮರಿಸುತ್ತಿರುವುದು. 78ರಲ್ಲಿ ಬರುವರು, ಐವತ್ತೇಳರಲ್ಲಿ ಹೋಗುವರು. ಮತ್ತು ಆಗ ಒಬ್ಬ ಗಂಡುಸಿನ ಶಿಷ್ಯನು ಮೇಲೇಳುವನು. ನಾನಕನು ಸತ್ಯವಾಣಿ ನುಡಿಯುತ್ತಾನೆ, ಸತ್ಯದ ಸಮಯದಲ್ಲಿ ಸತ್ಯವನ್ನೆ ಹೇಳುತ್ತಾನೆ.

(೭೨೨–೨೩)

## ಬಾಬರನ ಆಕ್ರಮಣ

### (ಖೇದ)

(೧೭೫)

ಖುರಾಸನವನ್ನು ಉಳಿಸಿಕೊಂಡನು. ಭಾರತವನ್ನು ಹೆದರಿಸಿದನು. ಕರ್ತಾರನು ದೋಷವನ್ನು ತನ್ನ ಮೇಲೆ ತೆಗೆದುಕೊಳ್ಳುವುದಿಲ್ಲ, ಮುಗಲರನ್ನು ಯಮರನ್ನಾಗಿ ಮಾಡಿ ಭಾರತಕ್ಕೆ ಕಳಿಸಿದನು. ಇಷ್ಟು ಸಂಹಾರವಾಯಿತು, ಇಷ್ಟು ಆತನ ಕ್ರಂದನವಾಯಿತು, ನಿನಗೆ ದಯೆ ಬರಲಿಲ್ಲವೆ? ಕರ್ತಾರನೇ, ನಿನಗೆ ಎಲ್ಲರೂ ಒಂದೇ ಸಮರು. ಶಕ್ತಿವಂತರು ಶಕ್ತಿವಂತನನ್ನು ಕೊಂದರೆ ಮನದಲ್ಲಿ ರೋಷವುಂಟಾಗುವುದಿಲ್ಲ. ಒಂದು ವೇಳೆ ಶಕ್ತಿಶಾಲಿ ಸಿಂಹವು ಗೋವುಗಳ ಗುಂಪನ್ನು ಕೊಂದರೆ ಅದರ ಹೊಣೆಯು ಸ್ವಾಮಿಯ ಮೇಲೆ. ರತ್ನದಂಥ ದೇಶವಿತ್ತು, ನಾಯಿಗಳು ಅದನ್ನು ಕೆಡಿಸಿದವು. ಎಲ್ಲರೂ ಸತ್ತರು. ಯಾರೂ ನೆನಿಸಲಿಲ್ಲ ಕೂಡ. ನೀನು ಕೂಡಿಸುವವನು, ಸ್ವತಃ ಬೇರೆ ಮಾಡುವವನು. ಇದು ನಿನ್ನ ಮಹಿಮೆ. ಯಾವನಾದರೂ ತನಗೆ ದೊಡ್ಡ ಹೆಸರು ಇಟ್ಟುಕೊಂಡರೆ, ಸ್ವೇಚ್ಛಾಚಾರಿಯಾಗಿ ವಿಲಾಸ ಮಾಡಿದರೆ ಅವನು ಸ್ವಾಮಿಯ ದೃಷ್ಟಿಯಲ್ಲಿ



 

ಜೇ ಕೋ ਨਾਲੁ ਧਰਾਏ ವಡਾ ಸಾਵ ಕರੇ ಮਨਿ ಭਾਣੈ ॥
ಖಸಮೈ ನದರೀ ಕೀಡಾ ಆਵੈ ਜੇਤੇ ਚੁਗੈ ದਾಣ੆ ॥
ಮರಿ ಮರಿ ಜೀਵੈ ತಾ ಕಿಛੁ ਪਾਏ ನಾನಕ ನಾਮੁ ವಖಾಣೈ ॥ ೩ ॥ ೫ ॥ ೩೯ ॥

ಆಸಾ.

(೧೭೬)

ಜಿನ ಸಿರಿ ಸೋಹਨਿ ಪಟੀਆ ಮਾਂਗੀ ਪਾਇ ಸಂಧರು ॥
ಸೇಸಿರ ಕಾತೀ ಮੁੰਨੀਅਨਿ੍ ಗಲ ವಿಚಿ ಆವੈ ಧੂಡಿ ॥
ಮਹਲਾ ಅಂದਰਿ ಹೋದੀਆ ಹੁਣਿ ಬಹਣਿ ನ ಮਿಲਨ੍ਹਿ ಇದೂರಿ ॥ ೧ ॥
ಆದೇಸು ಬಾಬಾ ಆದೇಸು ॥
ಆದಿ ಪುರಖ ತೇರਾ ಅಂತು ನ ಪಾಇಯਾ ಕರಿ ಕರಿ ದೇਖਹਿ ವೇಸ ॥ ೧ ॥ ರಹਾਉ ॥
ಜದਹੁ ಸೀਆ ವੀਆਹੀਆ ಲਾਡੇ ಸೋਹਨਿ ಪਾಸಿ ॥
ಹೀಡੋਲੀ ಚੜਿ ಆਈਆ ದಂದ ಖੰਡ ಕೀತೇ ರਾಸಿ ॥
ಉಪਰਹੁ ಪಾਣੀ ವਾਰੀਐ ಝੁਲੇ ಝਿਮਕਨਿ ಪਾಸಿ ॥ ೨ ॥
ಇਕੁ ಲਖੁ ಲಹਨ੍ਹਿ ಬಹਿਠੀਆ ಲਖੁ ಲಹਨ੍ਹਿ ಖੜੀਆ ॥
ಗਰੀ ಛੁਹਾਰੇ ಖਾਂਦੀਆ ಮਾਣਨ੍ਹਿ ಸੇಜಡੀಆ ॥
ತಿನ੍ਹ ಗಲਿ ಸಿಲಕਾ ಪಾಈਆ ತੁಟਨ੍ਹਿ ಮੋਤಸਰੀਆ ॥ ೩ ॥
ಧਨੁ ಜੋਬਨੁ ದੁಇ ವੈರೀ ಹೋಏ ಜಿਨ੍ਹੀ ರಖੇ ರಂಗು ಲಾਇ ॥
ದੂತਾ ನೋ ಫਰਮਾਇਆ ಲੈ ಚಲੇ ಪತಿ ಗਵਾਇ ॥
ಜೇ ತਿಸು ಭਾವೈ ದੇ ವಡਿਆਈ ಜೇ ಭਾವೈ ದੇਇ ಸಜਾਇ ॥ ೪ ॥
ಆಗੋ ದੇ ಜੇ ಚੇਤੀਐ ತਾਂ ಕਾਇತು ಮਿਲੈ ಸಜਾಇ ॥
ಸಾಹਾਂ ಸುರತಿ ಗವਾਈਆ ರಂಗਿ ತਮਾਸੈ ಚਾਇ ॥
ಬಾಬರವಾಣೀ ಫਿਰਿ ಗಈ ಕੁಇਰੁ ನ ರੋਟੀ ಖਾಇ ॥ ೫ ॥
ಇਕਨਾ ವಖਤ ಖੁਆਈਅਹਿ ಇਕਨ੍ਹਾ ಪੂਜಾ ಜಾಇ ॥
ಚਉಕੇ ವਿਣੁ ಹਿੰದವਾಣੀਆ ಕਿਉ ಟਿਕੇ ಕਢਹਿ ನਾਇ ॥
ರಾਮੁ ನ ಕਬਹੂ ಚੇਤਿਓ ಹੁਣਿ ಕಹਣਿ ನ ಮਿਲੈ ಖੁದਾਇ ॥ ೬ ॥
ಇಕਿ ಘਰਿ ಆਵਹਿ ಆਪਣੈ ಇಕਿ ಮਿਲਿ ಮਿಲಿ ಪੁਛਹਿ ಸುಖ ॥
ಇಕਨ੍ਹਾ ಏਹੋ ਲਿਖਿਆ ಬਹਿ ಬಹಿ ರೋਵਹਿ ದੁਖ ॥
ಜೋ ತਿਸು ಭਾವೈ ಸೋ ಥੀਐ ನಾನಕ ಕਿਆ ಮਾਨੁਖ ॥ ೭ ॥ ೧೧ ॥

ಆಸಾ ಅಸಟಪದೀಆ.

ಕಾಳುಗಳನ್ನು ಹೆಕ್ಕಿ ತಿನ್ನುವ ಕೀಟ ಇದ್ದ ಹಾಗೆ. ಯಾವನು ಅಹಂಕಾರವನ್ನು ಕೊಂದು ಜೀವಿಸುತ್ತ ಪ್ರಭುವಿನ ನಾಮವನ್ನು ಜಪಿಸುವನೊ ಅವನೇ ಸರ್ವಸ್ವವನ್ನು ಪಡೆಯುವನು ಎಂದು ನಾನಕನು ಹೇಳುತ್ತಾನೆ.

(೩೬೦)

(೧೭೬)

ಯಾರ ತಲೆಯ ಮೇಲೆ ಕೇಶವಿನ್ಯಾಸವು ಶೋಭಿಸುತ್ತಿತ್ತೋ, ಬೈತಲಲ್ಲಿ ಸಿಂಧೂರವು ಕಂಗೊಳಿಸುತ್ತಿತ್ತೊ ಅವರ ತಲೆಯು ಕತ್ತರಿಸಲ್ಪಟ್ಟಿತು. ಕುತ್ತಿಗೆಯ ವರೆಗೆ ಮಣ್ಣು ಹಾರಿ ಬಿದ್ದಿತು. ಅವರು ಮಹಲುಗಳಲ್ಲಿರುತ್ತಿದ್ದರು, ಈಗ ಅವರು ಮಹಲುಗಳ ಹತ್ತಿರ ಕೂಡುವಂತಿಲ್ಲ. ನಮಸ್ಕಾರ ಪ್ರಭು, ನಮಸ್ಕಾರ. ಓ ಆದಿ ಪುರುಷ, ನಿನ್ನ ರಹಸ್ಯವನ್ನು ಯಾರೂ ಅರಿಯರು; ನೀನು ನಾನಾ ವೇಷ ರಚಿಸುತ್ತಿರುವಿ ಮತ್ತು ನೋಡುತ್ತಿರುವಿ. ಇವರ ವಿವಾಹವಾದಾಗ ಇವರ ಜೊತೆಯಲ್ಲಿ ಮದುಮಕ್ಕಳು (ವರಗಳು) ಶೋಭಿಸುತ್ತಿದ್ದವು. ಇವರು ಪಲ್ಲಕ್ಕಿಯಲ್ಲಿ ಕುಳಿತು ಬಂದರು, ಲಾಲಕಿಗಳೂ ಹಸ್ತಿದಂತದಿಂದ ಜಡಿತವಾಗಿ ಸುಂದರವಾಗಿದ್ದವು. ಇವರಿಗೆ ಕದಲಾರತಿ ಎತ್ತಿ ಅತ್ತೆಂದಿರು ನೀರು ಕುಡಿದರು. ಇವರ ಮೇಲೆ ಬೀಸಣಿಗೆಗಳು ಬೀಸುತ್ತಿದ್ದವು. ಲಕ್ಷಾಂತರ ಅಭಿನಂದನೆ ಸಂದುವು ಇವರು ಬಂದು ಕುಳಿತಾಗ. ಇವರು ಎದ್ದಾಗ ಲಕ್ಷಾಂತರ ಲಕ್ಷಾಂತರ ಶುಭಾಶಯಗಳು ದೊರೆತವು. ಇವರು ತಿನ್ನುತ್ತಿದ್ದರು ಉತ್ತತ್ತಿ ಮತ್ತು ಬದಾಮು; ಹಾಸಿಗೆಯ ಆನಂದವನ್ನು ಅನುಭವಿಸುತ್ತಿದ್ದರು. ಆದರೆ ಇಂದು ಅವರ ಕೊರಳಿಗೆ ಹಗ್ಗವು ಬಿದ್ದಿದೆ, ಮುತ್ತಿನ ಮಾಲೆಗಳು ಹರಿದು ಹೋಗಿರುವವು. ಧನ ಯೌವನದಿಂದಾಗಿ ಇದ್ದ ವೈಭವ ವಿಲಾಸಗಳು ಇಂದು ವೈರಿಗಳಾಗಿರುವವು. ದೂತರಿಗೆ ಅಪ್ಪಣೆಯಾಯಿತು, ಇವರನ್ನು ಸೆಳೆದೊಯ್ದರು; ಅಪಮಾನಿತರಾದರು. ಪ್ರಭುವಿನ ಇಚ್ಛೆಯ ಮೇರೆಗೆ ಮಹಿಮೆ ದೊರೆಯುವುದು, ಪ್ರಭುವಿನ ಇಚ್ಛೆಯ ಮೇರೆಗೆ ದಂಡವೂ ಆಗುವುದು. ಮೊದಲಿನಿಂದಲೇ ಎಚ್ಚರದಿಂದಿದ್ದರೆ ದಂಡಿತರಾಗುವುದಿಲ್ಲ. ಶಾಹರು ವೈಭವ ವಿಲಾಸದಲ್ಲಿ ಎಚ್ಚರದಪ್ಪಿದರು. ಈಗ ಬಾಬರನ ರಾಜ್ಯವು ಸ್ಥಾಪಿತವಾಯಿತು. ಈಗ ರಾಜಕುಮಾರರ ಭೋಜನವೂ ಅಪಹೃತವಾಯಿತು. ನಮಾಜದ ವೇಳೆಯೂ ಕಳೆದುಹೋಯಿತು, ಪೂಜೆಯ ಸಮಯವೂ ಹೋಯಿತು. ಹಿಂದೂ–ಮುಸಲ್ಮಾನರ ಮಡಿಯ ಸ್ಥಳವೆಲ್ಲ ಉಳಿಯಿತು? ಅವರು ಹೇಗೆ ಸ್ನಾನಮಾಡುವರು? ಹಣೆಯ ಮೇಲೆ ಹೇಗೆ ಗಂಧ–ತಿಲಕ ಹಚ್ಚಿಕೊಂಡು ಕುಳಿತುಕೊಳ್ಳುವರು? ರಾಮನ ನಾಮವನ್ನು ಈಗ ತೆಗೆದುಕೊಳ್ಳುವುದಿಲ್ಲ, ಖುದಾನ ಹೆಸರು ತೆಗೆದುಕೊಳ್ಳುವುದೂ ಕಠಿಣ. ಕೆಲವರು ಹಿಂತಿರುಗಿ ಮನೆಗೆ ಬಂದರು, ಒಬ್ಬರಿಗೊಬ್ಬರು ಕುಶಲ ಸಮಾಚಾರ ವಿಚಾರಿಸುತ್ತಿರುವರು. ಕೂತು ಅಳುವುದು ಅನೇಕರ ಭಾಗ್ಯವಾದರೂ ದುಃಖ ತೀರದು. ಅವನಿಗೆ ಇಷ್ಟವಿದ್ದಂತೆ ಕೊನೆಯಾಗುವುದು. 'ಮಾನವನ ವಶದಲ್ಲಿ ಏನಿರುವುದು ?' ಎಂದು ನಾನಕನು ಅನ್ನುತ್ತಾನೆ.

(೪೧೭)



 

(೧೭೭)
ಕಹಾ ಸು ಖೇಲ ತವೇಲಾ ಘೋಡೆ ಕಹಾ ಭೇರೀ ಸಹನಾಈ ॥
ಕಹಾ ಸು ತೇಗಬಂದ ಗಾಡೇರಡಿ ಕಹಾ ಸು ಲಾಲ ಕವಾಈ ॥
ಕಹಾ ಸು ಆರಸೀಆ ಮುಹ ಬಂಕೆ ಐಥೈ ದಿಸಹಿ ನಾಹೀ ॥ ೧ ॥
ಇಹು ಜಗು ತೇರಾ ತೂ ಗೋಸಾಈ ॥ ಏಕ ಘಡೀ ಮಹಿ ಥಾಪಿ ಉಥಾವೆ ॥
ಜರು ವಂಡಿ ದೇವೈ ಭಾಈ ॥ ೧ ॥ ರಹಾಉ ॥
ಕಹಾ ಸು ಘರ ದರ ಮಂಡಪ ಮಹಲಾ ಕಹಾ ಸು ಬಂಕ ಸರಾಈ ॥
ಕಹಾ ಸು ಸೇಜ ಸುಖಾಲೀ ಕಾಮಣಿ ಜಿಸು ವೇಖಿ ನೀದ ನ ಪಾಈ ॥
ಕಹಾ ಸು ಪಾನ ತಂಬೋಲಿ ಹರಮಾ ಹೋಈಆ ಛಾಈ ಮಾಈ ॥ ೨ ॥
ಇಸು ಜರಿ ಕಾರಣಿ ಘಣೀ ವಿಗುತೀ ಇನಿ ಜರ ಘಣೀ ಖುಆಈ ॥
ಪಾಪಾ ಬಾಝಹು ಹೋವೈ ನಾಹೀ ಮುಇಆ ಸಾಥಿ ನ ಜಾಈ ॥
ಜಿಸ ನೋ ಆಪಿ ಖುಆಏ ಕರತಾ ಖುಸಿ ಲਏ ಚಂಗಿಆਈ ॥ ೩ ॥
ಕೋಟೀ ಹೂ ಪೀರ ವರಜಿ ರಹಾಏ ಜಾ ಮೀರು ಸੁਣਿਆ ಧਾਇਆ ॥
ಥಾನ ಮੁਕਾਮ ಜਲੇ ಬਿਜ ಮಂದਰ ಮੁਛਿ ಮੁਛਿ ಕੁਇਰ ರੁਲಾਇਆ ॥
ಕೋಈ ಮੁಗಲು ನ ಹೋಆ ಅಂಧಾ ಕಿನೈ ನ ಪರಚಾ ಲಾಇಆ ॥ ೪ ॥
ಮುಗಲ ಪಠಾಣಾ ಭਈ ಲಡಾಈ ರಣ ಮਹਿ ತೇಗ ವಗಾಈ ॥
ಓನ੍ਹੀ ತੁಪಕ ತਾਣਿ ಚਲਾਈ ಓನ੍ਹੀ ಹਸਤਿ ಚਿੜਾਈ ॥
ಜಿನ੍ಹ ಕೀ ಚੀਰੀ ದರਗਹ ಪਾಟੀ ತਿਨ੍ਹਾ ಮਰਣਾ ಭਾਈ ॥ ೫ ॥
ಇಕ ಹਿੰਦವਾਣੀ ಅವਰ ತੁರਕਾਣੀ ಭਟਿਆਣੀ ಠਕੁਰਾਣੀ ॥
ಇಕನ੍ਹਾ ಪੇਰਣ ಸਿਰ ಖੁਰ ಪਾਟੇ ಇಕਨ੍ਹਾ ವਾਸು ಮਸਾਣੀ ॥
ಜಿನ੍ಹ ಕೇ ಬಂಕೆ ಘರೀ ನ ಆਇਆ ತਿਨ੍ಹ ಕਿಉ ರੈಣਿ ವਿਹਾਣੀ ॥ ೬ ॥
ಆಪੇ ಕਰੇ ಕਰਾਏ ಕਰਤਾ ಕਿਸ ನੋ ಆಖਿ ಸੁಣਾਈਐ ॥
ದುಖು ಸುಖು ತೇਰੈ ಭਾਣੈ ಹೋವੈ ಕਿਸਥੈ ಜਾਇ ರੁਆਈਐ ॥
ಹುಕਮੀ ಹੁಕਮਿ ಚਲਾਏ ವਿಗਸੈ ನਾਨಕ ಲਿಖಿਆ ಪਾਈਐ ॥ ೭ ॥ ೧೨ ॥

**ಆಸಾ ಅಸಟಪದೀಆ.**

## ಆದರ್ಶ ಮಾನವ

(೧೭೮)
ಐಸೇಜನ ಬಿರಲೆ ಜಗ ಅಂದದಿ ಪರಖಿ ಖಜಾನೈ ಪಾಈಆ ॥
ಜಾತಿ ವರನ ತೇ ಭಏ ಅತೀತಾ ಮಮತಾ ಲೋಭು ಚುಕಾಇಆ ॥ ೭ ॥
ನಾಮಿ ರತೆ ತೀರಥ ಸೇ ನಿರಿಮಲ ದುಖು ಹಉಮೈ ಮੈਲੁ ಚುಕಾಇಆ ॥
ನಾನಕು ತಿನ ಕೇ ಚರನ ಪಖಾಲೈ ಜಿನ ಗುರಮುಖಿ ಸਾਚਾ ಭਾਇਆ ॥ ೮ ॥ ೭ ॥

**ಪ್ರಭಾತಿ ಅಸಟಪದೀಆ.**

(೧೭೭)
ಕುದುರೆಯ ಮೇಲೆ ಕುಳಿತು ಆಡುವ ಆ ಆಟವೆಲ್ಲಿ? ಅಶ್ವ ಶಾಲೆಯ ಕುದುರೆಗಳೆಲ್ಲಿ? ಆ ಭೇರಿಗಳೆಲ್ಲಿ ಶಹನಾಯಿಯೆಲ್ಲಿ? ಆ ಖಡ್ಗಧಾರಿ ಸೈನಿಕರೆಲ್ಲಿ? ಆ ತೋಪಿನ ಗಾಡಿಯ ಸೈನಿಕರೆಲ್ಲಿ? ಆ ಕೆಂಪು ನಿಲುವಂಗಿಗಳೆಲ್ಲಿ? ಕನ್ನಡಿಗಳೆಲ್ಲಿ? ವೀರ ಮುಖಗಳೆಲ್ಲಿ? ಏನೂ ಯಾವುವೂ ಕಾಣಿಸುವುದಿಲ್ಲ. ಈ ಜಗತ್ತು ನಿನ್ನದು ಗೋಸ್ವಾಮಿ; ಈ ಕ್ಷಣದಲ್ಲಿ ಸ್ಥಾಪಿಸುವೆ, ಕ್ಷಣದಲ್ಲಿ ಕೆಡಿಸುವೆ, ಧನವನ್ನು ಹಂಚುವೆ. ಆ ಮನೆಗಳೆಲ್ಲಿ, ಬಾಗಿಲುಗಳೆಲ್ಲಿ? ಮಂಟಪ—ಮಹಲುಗಳೆಲ್ಲ? ಎಲ್ಲಿ ಹೋದವು ಆ ಧರ್ಮಶಾಲೆಗಳು, ಬಂಕಣಗಳು? ನೋಡಿದೊಡನೆ ನಿದ್ರೆಯನ್ನು ಹಾರಿಸುವ ಮತ್ತು ಶೈಯಾಸುಖವನ್ನೀಯುವ ಕಾಮಿನಿಯರೆಲ್ಲಿಗೆ ಹೋದರು? ಎಲ್ಲಿದೆ ಅಂತಃಪುರ? ಎಲ್ಲಿದ್ದಾರೆ ವೀಳ್ಯದೆಲೆ ಮಾರುವಾಕೆ, ಮಾರುವವ? ಏನೂ ಇಲ್ಲಿ ಕಾಣಿಸುತ್ತಿಲ್ಲ. ಧನದಿಂದಾಗಿ ದೊಡ್ಡವರಾದವರು ನಷ್ಟರಾದರು. ಧನದಿಂದ ದೊಡ್ಡವರಾದವರು ಪ್ರಭುಮಾರ್ಗವನ್ನು ಕಳೆದುಕೊಂಡು ಬಿಟ್ಟರು. ಪಾಪವಿಲ್ಲದೆ ಧನ ಸಂಚಯವಾಗುವುದಿಲ್ಲ. ಸತ್ತ ಬಳಿಕ ಧನವು ಜೊತೆಗೆ ಬರುವುದಿಲ್ಲ ಎಂದೆಂದಿಗೂ. ಯಾರನ್ನು ಪ್ರಭುವು ಭ್ರಮಣಮಾಡಿಸಬಯಸುವನೊ ಅವರಿಂದ ಸದ್ಗುಣವನ್ನು ಕಸಿದುಕೊಂಡು ಬಿಡುವನು. ವೀರ ಬಾಬರನು ದಾಳಿಮಾಡಿದಾಗ ಕೋಟಿ ವೀರರು ಅವನನ್ನು ತಡೆಯುವ ದಕ್ಕಾಗಿ ಮಾಟ ಮಂತ್ರ ಮಾಡಿದರು. ಪೀರರ ಪವಿತ್ರ ಸ್ಥಳಗಳನ್ನೂ, ಹಿಂದೂಗಳ ಮಂದಿರಗಳನ್ನೂ ಸುಟ್ಟರು. ರಾಜಕುಮಾರರನ್ನು ತುಂಡರಿಸಿ ಮಣ್ಣುಗೂಡಿಸಿದರು. ಮಾಟ—ಮಾಯವು ತನ್ನ ಚಮತ್ಕಾರ ತೋರಿಸಲಿಲ್ಲ. ಯಾವ ಮುಗಲನೂ ಕುರುಡನಾಗಲಿಲ್ಲ. ಮುಗಲರು ಮತ್ತು ಪಠಾಣರ ನಡುವೆ ಯುದ್ಧ ವಾಯಿತು, ರಣರಂಗದಲ್ಲಿ ಖಡ್ಗಗಳು ಝಳಪಿಸಿದವು ಒಂದು ಕಡೆಯಿಂದ ಬಂದೂಕು ಹಾರಿಸಲಾಯಿತು; ಇನ್ನೊಂದು ಕಡೆಯಿಂದ ಗಜ ಸೈನ್ಯವು ಏರಿ ಬಂತು. ಪ್ರಭುವಿನ ಲೋಕದಲ್ಲಿ ಯಾರ ಕಾಲವು ತುಂಬಿಬಂದಿರು ವುದೊ ಅವರು ಸಾಯಲೇಬೇಕಾಗುವುದು. ಹಿಂದೂ ಸ್ತ್ರೀಯರು, ತುರುಕ ಸ್ತ್ರೀಯರು, ಭಟ್ಟರ ಸ್ತ್ರೀಯರು, ಜಮೀನುದಾರರ ಸ್ತ್ರೀಯರು ಅವರೆಲ್ಲರ ವಸ್ತ್ರಗಳು ಅಡಿಯಿಂದ ಮುಡಿಯವರೆಗೆ ಹರಿದುಹೋದವು. ಅನೇಕರು ಸ್ಮಶಾನವಾಸಿಗಳಾದರು. ಯಾರ ವೀರ ಗಂಡಂದಿರು ತಿರುಗಿ ಮನೆಗೆ ಬರಲಿಲ್ಲವೊ ಅವರ ರಾತ್ರಿ ಹೇಗೆ ಕಳೆಯಿತು? ಕರ್ತಾರನು ಸ್ವತಃ ಮಾಡುವನು. ಮಾಡಿಸುವನು, ಯಾರಿಗೆ ಫಿರ್ಯಾದಿ ಹೇಳುವುದು? ಸುಖ–ದುಃಖಗಳು ನಿನ್ನ ಇಚ್ಛೆಯ ಮೇರೆಗೆ ಬರುವವು, ನಮ್ಮ ರೋದನವನ್ನು ಯಾರಿಗೆ ಕೇಳಿಸೋಣ? ಪ್ರಭುವಿನ ಅನುಶಾಸನದಂತೆ ಎಲ್ಲವೂ ನಡೆಯುವುದು, ಅವನೇ ಅದನ್ನು ನೋಡುವನು, ಆನಂದಿಸುವನು. ನಾವು ನಮ್ಮ ಕರ್ಮಗಳ ಫಲವನ್ನೆ ಪಡೆಯುವೆವು ಎಂದು ನಾನಕನು ಹೇಳುತ್ತಾನೆ.

(೪೧೭–೧೮)

## ಆದರ್ಶ ಮಾನವ

(೧೭೮)
ಪ್ರಭುವು ಪರೀಕ್ಷಿಸಿ ತನ್ನ ಕೋಶದಲ್ಲಿ ಸೇರಿಸಿಕೊಳ್ಳುವಂಥ ಜನರು ಅಪರೂಪ. ಅವರು ಜಾತಿ—ವರ್ಣದ ಭೇದವನ್ನು ಮಾಡದವರು, ಮಮತ್ವ ಲೋಭವನ್ನು ಬಿಟ್ಟವರು. ತೀರ್ಥಗಳಂತೆ ನಿರ್ಮಲವಾಗಿದ್ದು ನಾಮರತರಾಗಿದ್ದವರು ಅವರು. ಅಹಂಕಾರ ನಾಶಮಾಡಿದವರು, ದುಃಖ—ಮಲದಿಂದ ದೂರವಾಗಿದ್ದವರು. ನಾನಕನು ಇಂಥವರ ಪಾದಪ್ರಕ್ಷಾಲನೆ ಮಾಡುತ್ತಾನೆ, ಗುರುವಿನ ಉಪದೇಶದಿಂದ ಸತ್ಪುರುಷರೊಡನೆ ಪ್ರೇಮವುಂಟಾಯಿತು.

(೧೩೫)